# ಭಾದ್ರಪದಮಾಸ

### ಭಾದ್ರಪದಮಾಸ ಶ್ರೀಮಂಗಳಗೌರಿ

ಭಾದ್ರಪದಮಾಸ ಶ್ರೀಮಂಗಳಗೌರಿ ಕರೆಯುವುದಕೆ। ವೇಗದ ಗಜನೇರಿ ಬಂದನು ಗಿರಿರಾಜ ಗೌರಿ ಕರೆಯುವುದಕೆ ಜಯ ಜಯ ಮಂಗಳ॥ಪ॥ ಬಂದ ಗಿರಿರಾಜನ ಕಂಡು ಈಶ್ವರನು ಛಂದದಿ ಉಪಚಾರವ ಮಾಡಿದನು। ಇಂದು ನೀವು ಬಂದ ಕಾರಣವೇನೆಂದು ಕೇಳಿದನು ಜಯಜಯಮಂಗಳ॥1॥ ಮಂಗಳಗೌರಿಯ ಕಳುಹಿಸಿಕೊಟ್ಟು ಇಂದಿಗೆ ತುಂಬಿತು ಒಂದು ವರ್ಷವು ಚಂದಿರ ಮುಖಿಯನು ಕಳಿಸಬೇಕೆನುತಲಿ ಗಿರಿರಾಜ ಕೇಳಿದನು॥2॥ ಬೀಸುವ ಗಾಳಿಸೂಸುವ ಮಳೆಯು ಪೇಚಾಡುವ ಹೊಳೆ ಹಳ್ಳಗಳು ಯಾಕಿಷ್ಟವಸರ ಬ್ಯಾಸಿಗಿ ಬರಲಿ ಕಳಿಸುವೆನೆಂತೆಂದಾ॥3॥ ಮೋಹದ ಮಗಳನ್ನು ನಾ ಹೊತ್ತು ಸಾಕಿ ಮಾರಿದೆನು ನಿನಗೆಂದೆನುತಲಿ ವಾರಿಜ ಮುಖಿಯಳ ಕಳುಹುದಿಲ್ಲೆಂಬುದು ನ್ಯಾಯವೇ ಈಶ್ವರನೆ॥4॥ ಬೆಟ್ಟದ ರಾಯನೆ ಸಿಟ್ಟು ಮಾಡಲಿ ಬೇಡಾ ಈ ಕ್ಷಣ ಕರಕೊಂಡು ಹೋಗಿರೆಂದು ಅಪ್ಪಣೆ ಕೊಟ್ಟನು ವೀಳ್ಯೆವ ತಕ್ಕೊಂಡು ನಡೆದಳು ಗೌರಮ್ಮ ಭೀಮೇಶ ಕೃಷ್ಣನ ಮನೆಗೆ ಜಯಜಯ ಮಂಗಳ॥5॥



## 35. "ಹೃಷೀಕೇಶ"ಮಾಸ ನಿಯಾಮಕ

ಹೃಷೀಕೇಶ ಸುಕೇಶ ಪರೇಶವಿವಂದೇ ಶರಣೇಶ ಕಲೇಶ ಬಲೇಶ ಸುಖೇಶ॥

ಶ್ರೀ ನಾರಾಯಣ ರಾಮ ಗೋಪತಿ ಹೃಷೀಕೇಶಾದಿ ರೂಪೋಕ್ಷಮಸ್ತಾಂ ಹಾತುಂ ಹರಿ ಸೂಕರಾಕೃತಿ ರಥ ದೇವಹೂತ್ಯಾತ್ಮಜಃ ವೇಣೀಮಾಧವ ಬಿಂದು ಮಾಧವ ತನುಸ್ತಿರೇವ್ಯಧತ್ತ ಸ್ತಿತಿಂ ಗಂಗೇ ಕಿಂ ಬಹುನಾಧುನಾಪಿವಸತಿ ತ್ವದ್ಭರ್ತೃಗೇಹೇಪ್ಯ ಸೌ॥

ಹೃಷೀಕೇಶ ಹೃಷೀಕೇಶ ಎಂದರೆ ಸರ್ವಋಷಿಗಳಿಗೂ ಆಶ್ರಯನಾದ್ದರಿಂದ।
ಹೃಷೀಕೇಶ ಎನಿಸಿಕೊಂಡು॥ಕೇಶವಾಯ ನಮಃ॥

ಋಷಿಗಳಾಶ್ರಮದಲ್ಲಿ ಹೃಷೀಕೇಶನಿದ್ದಾನೆ ರಾಮ ರಾಮ।
ಹೃಷೀಕೇಶನ ದಯದಿ ಋಷಿಗಳಾಶ್ರಮ ಕಂಡೆ ರಾಮರಾಮ॥ಕಾಶಿಯ ಹಾದಿಯಲಿ॥

ಹೃಷೀಕೇಷ ವೃಂದಾವನದಲಿ ।ನೀ। ಹರುಷದಿ ಕೊಳಲನೂದುತ ಯಮುನೆಯಲಿ।
ಸರಿಯರ ಸಮ್ಮೇಳದಲಿ।ನೀ। ಧರಿಸಿದ್ಯೋ ಮಂದಾರ ಮಾಲೆ ಕೊರಳಲಿ॥ಅಚ್ಯುತಾನಂತ॥

ಹುಸಿಯನಾಡಿ ಹೊಟ್ಟೆ ಹೊರೆವ ವಿಷಯದಲ್ಲಿ ರಸಿಕನೆಂದು।
ಹುಸಿಗೆ ನೀನು ಹಾಕದಿರೋ ಹೃಷೀಕೇಶನೇ ॥ಈಶ ನಿನ್ನ॥

ಋಷಿಜನ ವಂದ್ಯನೆ ಬಿಸಜನಾಭನೆ ದೇವ। ಋಷಿಜನರಿಗೆಲ್ಲ ಅಭಯವ ಕೊಡುತ್ತಿದ್ದ।
ಋಷಿಜನರಿಗೆಲ್ಲ ಅಭಯವ ಕೊಡುತ್ತಿದ್ದ ಶ್ರೀಕೃಷ್ಣ। ಹೃಷೀಕೇಷ ನಮ್ಮ ಮನೆದೈವ ॥ರಂಗಬಾರೋ॥

### ಏಳು ಹೃಷೀಕೇಶ ಏಳು ರವಿಶಶಿ

ಏಳು ಹೃಷೀಕೇಶ ಏಳು ರವಿಶಶಿ ವಂದ್ಯ॥ಪ॥ ಏಳು ಪಶುಗಳ ಕಾಯ್ದೆ ಪಾಲಿಸಿದೆ ಗೋಕುಲವ। ಏಳು ಯಶೋದೆ ಸುತನೆ ಏಳು ಭೂ ಸತಿ ರಮಣ॥ಅ.ಪ.॥ ಪಚ್ಚೆ ಮುಡಿವಾಳಗಳು ಅಚ್ಚ ಶಾವಂತಿಗೆಯು। ಬಿಚ್ಚನೆ ಜಾಜಿ ಸಂಪಿಗೆಯು ಪುನ್ನಾಗ। ಕುಕ್ಷಿಯೊಳು ಈರೇಳು ಭುವನವನು ಸಲಹುವೆ। ಅಚ್ಚ ಜಾಣೆಯರು ಶ್ರೀಗಂಧ ಪುನುಗುಕಸ್ತೂರಿ। ಬಿಚ್ಚನೆ

ಬಾಳೆಯೆಲೆಯ ಪಿಡಿದು ನಿಂತಿದ್ದಾರೆ। ಮುಚ್ಚುತಿವೆ ತಾರೆಗಳು ಹೆಚ್ಚುತಿದೆ ರವಿಕಿರಣ ಅಚ್ಯುತನೆ ಉಪ್ಪವಡಿಸ॥1॥ ಚೆಲುವೆಯರು ಚದುರಸಂಪನ್ನೆಯರು ಪನ್ನೀರು। ಪೊನ್ನ ತಂಬಿಗೆಗಳಲ್ಲಿ ಪಿಡಿದು ನಿಂತಿದ್ದಾರೆ। ಮನ್ನಣೆಯ ನಾರದರು ಮೊದಲಾದ ಸುರನಿಕರ। ನಿನ್ನ ಮಹಿಮೆಯ ಪಾಡಿ ನಲಿಯುತಿರೆ। ಇನ್ನು ಉದಯದ ಸಮಯ ಸಿರಿಯರಸ ಚೆನ್ನಿಗನೆ ಉಪ್ಪವಡಿಸ॥2॥ ದೇವಾಂಗವಸ್ತ್ರವನು ಪಿಡಿದು ನಿಂತಿದ್ದಾರೆ। ದೇವ ದೇವೇಶ ನಿಮ್ಮ ಓಲಗದ ಸಂಭ್ರಮಕೆ ದೇವಾದಿದೇವತೆಗಳೆಲ್ಲ ನೆರೆದು। ದೇವ ಪ್ರಲ್ಹಾದ ಬಲಿ ಮುಖ್ಯರನು ಕಾಯ್ದೆಂದು ದೇವ ಬ್ರಹ್ಮನ ಪಡೆದ ದೇವ ಗಂಗೆಯ ಪಿತನೆ। ದೇವ ದೇವೋತ್ತಮನೆ ದೇವಾದಿದೇವನೆ। ದೇವ ಪುರಂದರ ವಿಠಲನೆ ಉಪ್ಪವಡಿಸ॥3॥

### ಹೃಷಿಕೇಷಾ ನಾರಾಯಣ ಪದ್ಮನಾಭಾ ನಾರಾಯಣ

ಹೃಷಿಕೇಷಾ ನಾರಾಯಣ ಪದ್ಮನಾಭಾ ನಾರಾಯಣ। ಹರಿ ಹರೀ ನಾರಾಯಣ। ಜಯಗೋವಿಂದ ನಾರಾಯಣ॥ ಜಯ ಗೋಪಾಲ ನಾರಾಯಣ। ಹರಿ ಹರೀ ನಾರಾಯಣ॥

### ಪದ್ಮನಾಭ ಹೃಷಿಕೇಶ

ಪದ್ಮನಾಭ ಹೃಷಿಕೇಶ। ಪದ್ಮನೇತ್ರ ಪಾಹೀ। ಜನಾರ್ಧನ ದಾಮೋದರ ಜಲಜನಾಭ ಪಾಹಿ॥ ವಿಶ್ವರೂಪವೇದವಂದ್ಯ। ವಿಮಲ ರೂಪ ಪಾಹೀ। ಪರಮಪುರುಷ ಪಾಹಿ। ಪದ್ಮನಾಭ ಪಾಹಿ॥



## 36. ವರಾಹ ಜಯಂತಿ

### ನಮೋ ನಮಸ್ತೇಖಿಲ ಯಜ್ಞ — ರಾಗ: ರೇವತಿ

ನಮೋ ನಮಸ್ತೇಖಿಲ ಯಜ್ಞತಂತವೇ। ಸ್ಥಿತೌ ಗೃಹೀತಾಮಲಸತ್ವ ಮೂರ್ತಯೇ। ದಿಷ್ಟ್ಯಾಹತೋಯಂ ಜಗತಾಂ ಅರುಂತದಃ ತ್ವತ್ಪಾದ ಭಕ್ತ್ಯಾವಯಮೀಶ ನಿವೃತಾಃ॥

### ಶ್ರೀ ಲಕ್ಷ್ಮೀವರಾಹಂ ಭಜೇಹಂ — ರಾಗ: ಅಭೋಗಿ-ಆದಿತಾಳ

ಶ್ರೀ ಲಕ್ಷ್ಮೀ ವರಾಹಂ ಭಜೇಹಂ। ಶ್ರೀ ಲಕ್ಷ್ಮೀ ಸಹಿತಂ ಶ್ರಿತಜನ ಶುಭಪ್ರದಂ॥ಪ॥ ನೀಲಮೇಘ ಜಯಶ್ಯಾಮಳಗಾತ್ರಂ ನೀಳಾಭೂದೇವೀಸ್ತುತಿ ಪಾತ್ರಂ। ನೀಲಕಂಠಶಿವ ಗುರುಗುಹ ಮಿತ್ರಂ ನಿಖಿಲ ಭಕ್ತಜನ ಭಯಾರ್ತಿದಾತ್ರಂ॥ಅ.ಪ॥ ಮಂಗಳಾಲಯಾಭೋಗಿನುತಪದಂ ಪುಂಗವ ಬುಧಜನನತಂ ವೇದನುತಂ। ಶಂಕರ ಪ್ರಿಯಕರಂ ಕುಬೇರ ಪ್ರತಿಷ್ಠಿತಂ ಶಂಖಚಕ್ರಧರಂ ಕೃಪಾಕರಂ। ಪಂಕಜಾಸನ ಪ್ರಮುಖ ಸೇವಿತಂ ಪಂಕಜ ಮುಖ ಭಾರ್ಗವೀ ಭಂಗಹರ। ತಾಮ್ರಪರ್ಣೀ ತೀರಸ್ಥಂ ಸಂಕಟಹರ ಸದಾನಂದ ಸಹಿತಂ॥ಚ॥

### ಯಾಕೆ ಮೊಗವ ತಿರುಗಿಸಿದಿ — ರಾಗ: ಕಾಂಬೋದಿ-ಆದಿತಾಳ

ಯಾಕೆ ಮೊಗವ ತಿರುಗಿಸಿದಿ ಪೇಳೋ॥ಪ॥ ಶ್ರೀಕಾಂತ ನೀನಿಲ್ಲಿ ವರಾಹ ರೂಪದಿ ನಿಂತು॥ಅ.ಪ॥ ದುರುಳ ಹಿರಣ್ಯಕ ಧರೆಯ ಅಪಹರಿಸೆ। ಸಿರಿದೇವಿ ಕರೆಗೆ ನೀ ಭರದಿ ಪೋಗಿ। ಮರುಳನಂದದಿ ಇಪ್ಪ ಅಸುರನಾ ಅಸು ತೆಗೆದು। ಧರೆಯ ಕೋರೆಯ ಮೇಲೆ ಇರಿಸಿದಾ ಮೂರುತಿ॥1॥ ಧರಣಿದೇವಿಯ ರಮಣ ಸಿರಿಯನ್ನು ಕಾಣುತ್ತ। ಪರಿಪರಿ ಮಾತುಗಳ ಆಡುವಾ ಬಗೆಯೋ। ಧರಣಿದೇವಿಯು ಪ್ರಶ್ನೆಸುರಿಮಳೆಗರೆದಾಗ। ಪರಿಪರಿ ಅರ್ಥವನು ತಿಳಿಸುವ ಬಗೆಯೋ॥2॥ ಧರೆದೇವಿ ಅಂದವನು ಕ್ಷಣವು ಬಿಡದಲೆ ನೋಡಿ। ಹಿರಿಹಿರಿ ಅವಳನ್ನು ಹಿಗ್ಗಿಸುವ ಬಗೆಯೋ। ಸಿರಿರಮಣ ನೀನಾಗಿ ಧರೆಯ ಕರವನು ಪಿಡಿದು। ವರಾಹ ಹರಿ ವಿಠಲನಾಗಿ ಮೆರೆದೂ॥3॥

**ಆದಿ ವರಾಹನ ಚೆಲುವ ಪಾದವ** **ರಾಗ: ಮಲಹರಿ-ತ್ರಿಪುಟತಾಳ**

ಆದಿ ವರಾಹನ ಚೆಲುವ ಪಾದವ ಕಾಣದೆ ಕಣ್ಣು। ವೇದನೆಯಾಗಿವಳ ಬಾಧಿಸುತಲಿದೆ ಎನ್ನ॥ಪ॥ ಈ ಧರಣಿ ಮುಳುಗೆ ಶುಕ್ಲ ನದಿಯ ದಕ್ಷಿಣದಲಿದ್ದ। ಮೇದಿನಿಯ ಕೋರೆದಾಡೇಲೆತ್ತಿದಂಥ ॥ಅ.ಪ॥ ಅಷ್ಟ ಸ್ವಯಂ ವ್ಯಕ್ತ ಶ್ರೀಮುಷ್ಣ ಅಷ್ಟಾಕ್ಷರ ಮಂತ್ರವನ್ನು। ಇಷ್ಟು ಮಾತ್ರ ತಿಳಿದವರೆಷ್ಟು ಪುಣ್ಯ ಮಾಡಿದರೂ॥ ನಷ್ಟ ಬಾರದಂತೆ ಮನದಿಷ್ಟಾರ್ಥವ ಕೊಟ್ಟು ಕಾಯ್ವನಮ್ಮ। ಅಷ್ಟದಿಕ್ಕಿಗೆ ಒಡೆಯನಿವನೊಬ್ಬ॥1॥ ನಿತ್ಯ ಪುಷ್ಕರಿಣಿ ಸುತ್ತ ಹದಿನಾರು ತೀರ್ಥ। ನಿತ್ಯ ಸೇವೆಗಾಗಿರುವ ಪ್ರತ್ಯೇಕ ಅಶ್ವತ್ಥವಿರಲು॥ ಅರ್ಥಿ ನೋಡ ಬಂದಾರೆಂದು ಶ್ರುತ್ಯರ್ಥ ಕೊಂಡಾಡುತಿರೆ। ಅತ್ಯಂತ ಅಕ್ಕರೆ ಯಿಂದಲಿ॥2॥ ಸತ್ಯ ಲೋಕದ ಬ್ರಹ್ಮನು ಭೃತ್ಯರನು ಕೂಡಿಕೊಂಡು। ವಿಸ್ತಾರದಿ ನಿಂತು ಕೈಯನೆತ್ತಿ ಮುಗಿವರೆಂತೆಂದು॥ ರತ್ನದ ಭೂಷಣಗಳು ಮುತ್ತಿನೋಲೆ ಮೂಗುತಿಯು। ಮುತ್ತೈದೆ ಅಂಬುಜವಲ್ಲಿಗೆ ಕೊಟ್ಟ॥3॥ ಅಲ್ಲಲ್ಲಿ ಪುಣ್ಯತೀರ್ಥವು ಅಲ್ಲಲ್ಲಿ ಸ್ನಾನದಾನವು। ಅಲ್ಲಲ್ಲಿ ಜಪತಪವು ಅಲ್ಲಲ್ಲಿ ದೇವತಾರ್ಚನೆ। ಅಲ್ಲಲ್ಲಿ ಗಂಧರ್ವರ ಗಾನ ಅಲ್ಲಲ್ಲಿ ಮಧ್ವಮತಸ್ತೋಮ॥ ಅಲ್ಲಲ್ಲಿ ನಂದನವನ ಅಲ್ಲಲ್ಲಿ ಮಲ್ಲಿಗೆ ಹೂವಿನ ವನ॥4॥ ಅಲ್ಲಿ ವರಾಹ ಅಂಬುಜವಲ್ಲಿಯು ಝುಲ್ಲಿಕಾವನದಲಿದ್ದರು। ದಂಡಕಾರಣ್ಯ ಭೂಮಿಲಿ ತೊಂಡಮಂಡಲದೊಳಗೆ। ಹಿಂಡಿ ಹಿಂಡು ಅಟ್ಟಿಬಂದ ದಂಡಕಾಸುರ ಪಡೆಯ। ಖಂಡಿಸಿ ದೈತ್ಯರನೆಲ್ಲ ತುಂಡು ಮಾಡಿದನುದ್ದಂಡ ಶ್ವೇತ ವರಾಹನು॥5॥ ಕಂಡು ಭಜಿಸಿರೊ ಗಜಗಂಡು ಸುಯಜ್ಞಮೂರುತಿ। ಕೊಂಡಾಡಿದ ಭಜಕರ ಮಂಡೆಪೂಬಾಡದೆಂದೆಂದು॥ ಪುಂಡರೀಕ ಸ್ವಾಮಿ ತಾನು ಉಂಡು ಮಿಕ್ಕ ಪ್ರಸಾದವ ಪ್ರಚಂಡ ಹನುಮಂತಗೆ ಕೊಟ್ಟ॥6॥ ಭಾರವ ಹೊರುವ ವೇಳೆ ಗರುಡೋತ್ತಮನು ಬಂದು ಬೇಗ। ಗುರುಮಂತ್ರ ಉಪದೇಶ ಪಡೆದು ಹರಿಸ್ಮರಣೆಯಿಂದಲಿ॥ ನರಬಾಧೆಗಳು ಬಾರದೆಂದು ಶ್ರೀ ಹರಿಪಾದ ತಿರುಪತಿ ಉತ್ತರ ಶೇಷವರದ। ಪುರಂಧರ ವಿಠಲನ ಚರಣ ಕಮಲದಲಿ ಓಲಾಡಿದಿ ಯೆಂದು॥7॥

**ಆವ ಕಾರಣ ಮೊಗವ** **ರಾಗ:ಕಾಂಭೋಧಿ, ಝಂಪೇತಾಳ**

ಆವ ಕಾರಣ ಮೊಗವ ತಿರುಗಿಹೆಯೋ ಪೇಳು। ಭೂ ವರಹ ಸ್ವಾಮಿ ಪುಷ್ಕರಣಿ ತೀರಗನೆ॥ಪ॥ ರಥ ಸಮೂಹಗಳೇರಿ ನೀ ಪ್ರಕಾಶಿಪ ಬಗೆಯೋ। ಸತಿಯ ಲಾವಣ್ಯತಿಶಯವ ನೋಡುವ ಬಗೆಯೋ। ಮಿತಿಯಿಲ್ಲದಸುರರ ಉಪೇಕ್ಷೆ ಮಾಡುವ ಬಗೆಯೋ। ಪತಿತ ಪಾವನ ಪೂರ್ಣಕಾಮ ನಿನಗೆ ನುತಿಸಿ-ಭಿನ್ನೈಸುವೆನು ಪೇಳೋ ಗುಣಧಾಮಾ॥1॥ ಭಜಕರೆನ್ನನು ಬಿಡರೆಂಬ ಮನಸಿನಾ ಬಗೆಯೋ। ಅಜಭವಾದಿಗಳ ಸಂಸ್ತುತಿಗಳಾಲಿಪ ಬಗೆಯೋ। ರಜನೀ ಚರರ ಸದೆದು ನಾಟ್ಯವಾಡುವ ಬಗೆಯೋ। ಭುಜಗಭೂಷಣ ಪೂಜ್ಯಚರಣ-ತ್ರಿಜಗದ್ವಿಲಕ್ಷಣ ಸುರೂಪನಿರ್ಲೇಪ॥2॥ ಅನುಗರೊಶನೀನಾದೊಡೆಮ್ಮನು ಮರೆವರೆಂದು। ವನಿತೆಗಾರರಿಯದಂತುಪದೇಶಿಸಿದ ಬಗೆಯೋ। ಘನಲಕ್ಷಣ ಮುಖಾಬ್ಜವನು ಚುಂಬಿಸುವ ಬಗೆಯೋ। ವನಜ ಸಂಭವನ ನಾಸಜನೆ ಜಗ-ಜ್ಜನಕ ಜಗನ್ನಾಥ ವಿಠಲ ಕೃಪಾಸಾಂದ್ರಾ॥3॥

**ಸ್ವಾಮಿ ಪುಷ್ಕರ ತೀರ** **ರಾಗ:ವರಾಳಿ,ಝಂಪೇತಾಳ**

ಸ್ವಾಮಿ ಪುಷ್ಕರ ತೀರ ನಿಲಯನಮೋ। ಸ್ವಾಮಿ ವರಾಹ ವೆಂಕಟನಾಯಕಾ। ಸ್ವಾಮಿ ಪಾಹಿ ಪಾಹಿ ತ್ರಾಹಿ। ಸ್ವಾಮಿ ವರಾಹ ವೆಂಕಟನಾಯಕಾ॥ಪ॥ ಯಜ್ಞಗಾತ್ರ ವಿಧಿನುತ ಪ್ರಭು ಶ್ರೀ। ಯಜ್ಞ ವರಾಹ ವೆಂಕಟನಾಯಕಾ। ಯಜ್ಞ ಭೋಕ್ತ್ರ ಹೇಮಾಂಬಕ ಹರ। ಯಜ್ಞ ವರಹ ವೆಂಕಟನಾಯಕಾ॥1॥ ಭೂಭಯ ದೂರ ಧರಾ ಮನೋಹರ। ಭೂವರಾಹ ವೆಂಕಟನಾಯಕಾ। ಶೋಭಿತ ಬಾಲ ಚಂದ್ರೋಪಮ ಕ್ರೋಧ। ಭೂವರಾಹ ವೆಂಕಟನಾಯಕಾ॥2॥ ಶ್ವೇತ ಹಯವದನ ಶ್ವೇತಾಂಬರಧರ। ಶ್ವೇತ ವಾಹನ ಸಖ ಶ್ವೇತ ನಿಭಾ। ಶ್ವೇತಾದ್ರೀಶಾರ್ಚಿತ ಪಾದಕಮಲ। ಶ್ವೇತವರಾಹ ವೆಂಕಟನಾಯಕ। ಪಾತಕ ಮೋಚಕ ಪ್ರಸನ್ವೆಂಕಟ ಶ್ವೇತ ವರಾಹ ವೆಂಕಟನಾಯಕ॥3॥

**ಶರಣು ಹರಿ ಆನತ** **ರಾಗ: ದೇಶ್, ಅಟ್ಟತಾಳ**

ಶರಣು ಹರಿ ಆನತ ಜನಾಶ್ರಯ। ದುರಿತ ಕರಿ ಕಂಠೀರವ। ಶರಣು ಸಿರಿ ಭೂ ವರಾಹ ದೇವನೆ। ಶರಣು ವರ ಯಜ್ಞಾತ್ಮಕ ॥ಪ॥ ಅನಿಮಿಷರು ಸನಕಾದಿ ಮುನಿಗಳು। ಅನುದಿನದಿ ಸ್ತುತಿಗೈಯ್ಯಲೂ। ದನುಜ ಹೇಮಾಂಬಕನ ಕೃತ್ಯಕ। ವನಿ ಬಳಲಿ ಮೊರೆಯಿಡುತಿರೆ॥ ಘನಕೃಪಾಂಬುಧಿ ಕ್ಷೀರವಾರಿಧಿ। ಮನೆಯಲರಿದತಿ ವೇಗದಿ। ವನಜಭವನಾ ನಾಸಾಪುಟದಿನೀ। ಜನಿಸಿದಗಣಿತ ಮಹಿಮನೆ ॥1॥ ಲೀಲೆಯಿಂದಣುವಾಗಿ ಅಮರರ। ಜಾಲಕಚ್ಚರಿಯಾಗಲೂ। ಮ್ಯಾಲೆಗಿರಿಯಂತಾದೆ ಹರಿಯೆ ತ। ಮಾಲವರ್ಣಾಂಕಿತ ಮುಖಾ॥ ಬಾಲಚಂದ್ರ ಸಮಾನವಾದ ವಿ।ಶಾಲ ವಿಮಲ ಚರಿತ್ರನೆ। ಬಾಲ ಸುಬ್ರಹ್ಮಣ್ಯದ್ವಿಜವರ। ಶೀಲಪಾಲಿತ ಚರಣನೇ॥2॥ ವ್ಯಗ್ರ ಪ್ರಳಯಾಂಬುಕ್ಕಿಳಿದು ಘನ। ಘರ್ಘರ ಖರ ಧ್ವನಿಗಳಿಂ। ಶೀಘ್ರ ವೈರಿಯ ಸದೆದು ಕ್ರೋ।ಧಾಗ್ರದಲಿ ಮಹಿ ನೆಗಹಿದೆ॥ ಸ್ವರ್ಗ ಜನರಿಂದಮಿತ ಸ್ತುತಿಯನವಗ್ರಹಿಸಿ ವರಕರುಣದಿ। ಉಗ್ರತೇಜ ಪ್ರಸನ್ವೇಂಕಟಗೆ ಸಗ್ರನಿಲಯ ನಮೋ ಹರೇ॥3॥

**ಭೂವರಾಹ ಪಾಲಿಸೆನ್ನ** **ರಾಗ: ಅಮೃತವರ್ಷಿಣಿ**

ಭೂವರಾಹ ಪಾಲಿಸೆನ್ನ ಶಾಮಲಾಂಗ ಕಾಮ ತಾತ। ಪಾವಮಾನ ಕರಗಳಿಂದ ಸೇವ್ಯಮಾನ ಚಾರು ಚರಣ॥ಪ॥ ಧರೆಯನೆತ್ತಿ ತೊಡೆಯೊಳಿಟ್ಟು ಕರಗಳಿಂದ ಲಪ್ಪಿ ಕೊಂಬ। ಕರುಣದಿಂದ ಸುರರಿಗಭಯವಿತ್ತ ದಿವ್ಯ ಕೋಲಮೂರ್ತಿ॥1॥ ಎರಡನೆಯ ಹಿರಣ್ಯಾಕ್ಷ। ದೈತ್ಯನನ್ನು ಮಥಿಸಿದಂಥ। ಧರಣಿಯಲ್ಲಿ ನರಕವನ್ನು। ಜನಿಸಿದಂಥ ಮಂಗಲಾಂಗ॥2॥ ದೇಶದೊಳ್ ಶ್ರೀಮುಷ್ಣವೆನಿಪ। ಕ್ಷೇತ್ರದೊಳಗೆ ನೆಲಸಿದಂಥ। ಶೇಷ ಶಿರದೊಳ್ ಚರಣವಿತ್ತ। ರಾಜನಾಥ ಹಯಮುಖಾತ್ಮ॥3॥

**ದೇವಿ ಅಂಬುಜವಲ್ಲಿ** **ರಾಗ: ಶಿವರಂಜನಿ**

ದೇವಿ ಅಂಬುಜವಲ್ಲಿ ರಮಣನೆ ಭೂವರಾಹ ದಯಾನಿಧೆ॥ಪ॥ ಪವಮಾನನ ದಿವ್ಯ ಕರದಲಿ ಸೇವೆ ಸಂತತಗೊಳ್ಳುವಿ॥ಅ.ಪ.॥ ಅವನಿಯೊಳು ಶ್ರೀಮುಷ್ಣುಕ್ಷೇತ್ರದಿ ನೀ ವಿಹಾರವ ಮಾಡುವಿ। ಭವವಿಮೋಚನ ಭಕ್ತವತ್ಸಲ ಕವಿಗಳಿಗೆ ಕರುಣಾಕರ॥1॥ ಅತ್ಯಗಾಧ ಸುಶೀಲ ಜಾಹ್ನವಿ ಸುತ್ತು ಷೋಡಶ ತೀರ್ಥದಿ। ನಿತ್ಯಪುಷ್ಕರಣಿಯ ಗರ್ಭದಿ ನಿತ್ಯ ಇರುವದ ಕಂಡೆ ನಾ॥2॥ ಮತ್ತೆ ವರ್ಣಿಪೆ ತೀರ್ಥ ತಟದಲಿ ಉತ್ತಮಾಗ್ನೇಯ ಭಾಗದಿ। ಚಿತ್ತ ವೇದ್ಯದಿ ಕಲ್ಪತರು ಅಶ್ವತ್ಥರೂಪದಿ ಇರುವನ॥3॥ ಕರಗಳೆರಡು ಕಟಿಯಲಿಟ್ಟು ಕೋರೆಹಲ್ಲನು ತೋರುತ। ಧರಿಸಿ ಚಿನ್ಮಯ ಸಾಲಿಗ್ರಾಮದ ಸರವು ಈ ಪರಿ ಬೆಳಗುತ॥4॥ ಘನ್ನ ಶ್ವೇತವರಾಹ ಮೂರುತಿ ಎನ್ನ ಪೂರ್ವದ ಪುಣ್ಯದಿ। ನಿನ್ನ ಶುಭಕರ ಪಾದಪಂಕಜವನ್ನು ಕಂಡೆನು ಇಂದು ನಾ॥5॥ ಸುಂದರಾನನ ಕಂಜ ಮಧುಪನ ಇಂದು ನೋಡಿದ ಕಾರಣ। ಬಂದ ದುರಿತಗಳೆಲ್ಲ ಹೋದವು ಚೆಂದ ಶುಭಕರ ವಾದವು ॥6 ॥ ಮಲ್ಲಮರ್ದನ ವೈಕುಂಠದಿಂದ ಮೆಲ್ಲಮೆಲ್ಲನೆ ಬಂದೆಯ। ಝುಲ್ಲಿಕಾವನದಲ್ಲಿ ಕುಳಿತು ಎಲ್ಲ ಭಕ್ತರ ಸಲಹುವಿ॥7॥ ಸೂಕರಾಸ್ಯನೆ ನಿನ್ನ ಪಾದಕನೇಕ ವಂದನೆ ಮಾಡುವೆ। ಶೋಕಹರ ಗೋಪಾಲವಿಠಲ ನೀ ಕರುಣಿಸಿ ರಕ್ಷಿಸೋ॥8॥

**ಶ್ರೀಮುಷ್ಣ ಪಂಢರೀ ಪರಾತ್ಪರ** **ರಾಗ: ಮಧ್ಯಮಾವತಿ**

ಶ್ರೀಮುಷ್ಣ ಪಂಢರೀ ಪರಾತ್ಪರ। ಶ್ರೀ ಮತ್ಕಟಕರ ಜೀವೋದ್ಧಾರ ॥ಪ॥ ಲೋಕಮಂಗಲ ಉದಯ ದೇಹಲೀ ಶ್ರೀಕರ-ಸಹಸ್ರಭಾನು ಸುಂದರ। ನಾಕ-ನಿಕರ- ಕರ-ಮಾಧಾತ್ವಂಜಲಿ ವರ-। ವಿಕಾಶಿ ನೇತ್ರ ನವಸುಂದರ ಋತ॥1॥ ವಿಸ್ಮೃತ ಪೂರ್ವ ಋಣಾನುಬಂಧಿಗ ಶಾಶ್ವತ ಮೂರ್ತಿ ಸೂಕರ ವಿಠಲ। ಸಾಶ್ವ ಸಾಕಾರ ಗೋಪಾಲವರ್ಯ ಆಶ್ವಾಸಹಿತ ಮುಕ್ತಿ ತೋರಣ ॥2॥ ಭವ ಎಂದರೆ ಸ್ವಯಂ ಭೂತಿ ಭವ ಭವ ವಿಭಣತಿ ವಿಸ್ತಾರ ಸಾಷ್ಟಗ। ಭಾವ ಗಂಭೀರ ತೃಣಾಮಿತ ತೋಷ। ಭವ ಸಾಂತರ ಶ್ರೀ ವರಹವಿಠಲ॥3॥

## ಪಾಲಿಸೆನ್ನನು ದೇವಾ ಪರಮಪುರುಷಾ

ಪಾಲಿಸೆನ್ನನು ದೇವಾ ಪರಮ ಪುರುಷಾ॥ಪ॥ ಭೂಲೋಲ ಶ್ರೀಮುಷ್ಣನಿಲಯ ಶ್ವೇತ ವರಹಾ॥ಅ.ಪ.॥ ಸ್ವಾಯಿಚ್ಛೆಯಿಂದಲಿ ಬಂದು ಮೆರೆದು ಮಹಾಕೀರ್ತಿಯನು। ಪಯೋನಿಧಿ ಸುತೆಯಿಂದ ತುತಿಸಿಕೊಳ್ಳುತಾ। ಜಯ ಜಯದೇವನಾಶ್ರಯ ಕಾಮಧೇನು ನೀ। ದಯಮಾಡಿ ನೋಡುವುದು ದಾಸನೆನಸುವುದು॥1॥ ಚಿತ್ತವಧಾರು ಪರಾಕು ಬೊಮ್ಮಾಂಡವನು। ಹೊತ್ತು ನಸುನಗು ನಾಗಾರಿ ಗಮನಾ। ಮುತ್ತು ಮಣಿಮಯದಾಭರಣ -ದಿಂದೆಸೆವದೇ। ಪೋತ್ತಮನೆ ದಾನವರ ಬಲವಳಿದಾ ಧೈರ್ಯ॥2॥ ನಿತ್ಯ ಪುಷ್ಕರಣಿಯಲಿ ನಿರುತ ಪೂಜೆಯಗೊಂಡು। ಪ್ರತ್ಯಕ್ಷವಾಗಿ ವಕಗಳ ನೀಡುತಾ। ಸತ್ಯ ಸಂಕಲ್ಪ ಸಿರಿ ವಿಜಯವಿಠಲ ವರಹ। ಭೃತ್ಯನೆನಿಸಿ ನಿನ್ನ ಸ್ತೋತ್ರ್ಯ ದೊಳಗಿಡು ದೇವಾ॥3॥

## ಇಂದೇ ತೋರಿಸಿದೆ

ಇಂದೇ ತೋರಿಸಿದೆ। ಸ್ವಂ ಶ್ರೀ। ಮಂದಸ್ಮಿತ ವರಹ॥ಪ॥ ಏಕೆ ವಿರಹ ಸದಾರತಿ ನಾನಿಹೆ। ಬೇಕುಬೇಡಕೆ ನನ್ನುಡಿ ಇರುತಿರೆ॥1॥ ಕಾಣಿಸಿ ಶ್ರೀವರ ಮನ ಸಂತೈಸಿದೆ। ಕಣ್ಣಿರೆ ಸರಸತಿ ಭಾಗ್ಯ ಕರುಣಿಸಿದೆ॥2॥ ಅರಿಯದೆ ಅತ್ತಿತ್ತ ಸೇರದೆ ತಿಣುಕೆ। ಸರ್ರನೆ ತೋರಿ ದಾರಿ ಸಾಗಿಸಿದ॥3॥ ವ್ಯರ್ಥ ಇತರ ಸಾಧನೆ ಅರಿವಿಲ್ಲದೆ। ಪಾರ್ಥ ಸಖ ವರಹವಿಠಲ ನುಡಿಯೇ॥4॥

## ಭೂವರಾಹ ಸ್ವಾಮಿ

ಭೂವರಾಹ ಸ್ವಾಮಿ ತವಭಕ್ತ ಜನ ಪ್ರೇಮಿ॥ಪ॥ ಸೇವಿಸುವರ ಕಾವ ಸರ್ವಾಂತ- ರ್ಯಾಮಿ॥ಪ॥ ಮೊದಲನೆ ಕೃತಯುಗದಿ ಶುಕ್ಲ ಸಂವತ್ಸರದಿ। ಆ ದಿನಕರನ ವಾರದಿ ಅಶ್ವಿನಿ ನಕ್ಷತ್ರದಿ॥ ಮುದದಿ ಅವತರಿಸಿದ ಮಾಘಸಿಕ ಸಪ್ತಮಿ ದಿನದಿ। ವದನದಿ ನೆಲಕೆದರಿ ಬೇರುಗೆಡ್ಡೆಯ ಭುಂಜಿಸಿದೆ॥1 ॥ ಆ ಮಹಾ ವೇದಗಳ ಹೇಮಾಕ್ಷ ಅಪಹರಿಸಿ। ಭೂಮಿ ಒಳಗೆ ಅಡಗಿ ಕುಳಿತ ಕಣ್ ತಪ್ಪಿಸಿ॥ ಭೀಮ ಭಯಂಕರಕೋರೆ ದಂತದಲಿ ಭೇಧಿಸಿ। ಹೇಮಗರ್ಭನಿಗಿತ್ತೆ ದೈತ್ಯನ ಸಂಹರಿಸಿ॥2॥ ವೆಂಕಟೇಶಗೆ ಶತಪಾದ ಭೂಮಿಕೊಟ್ಟ ಭೂಪಾಲ। ಅಂಕವನಲಂಕರಿಸಿದ ಅವನಿದೇವಿ ಲೋಲ॥ ಪಂಕಗಳ ಕಳೆವ ಮಂಗಳಾಂಗ ಹರಿವಿಠಲ। ಶಂಕೆಯಿಲ್ಲದೆ ಪೊರೆವ ಶಿಷ್ಟ ಜನ ಪರಿಪಾಲ॥3॥

## ಪ್ರಹ್ಲಾದಾಹ್ಲಾದಹೇತುಂ (ಶ್ರೀ ವರಾಹ ಪಂಚಕಮ್)

ಪ್ರಹ್ಲಾದಾಹ್ಲಾದಹೇತುಂ ಸಕಲ ಗುಣಗಣಮ್ ಸಚ್ಚಿದಾನಂದ ಮಾತ್ರಂ ಸೈಂಹ್ಯಾಸಹ್ಯೋಗ್ರಮೂರ್ತಿಂ ಸದಭಯ ಮರಿಶಂಖೌ ರಮಾಂ ಬಿಭ್ರತಂ ಚ। ಅಂಹಸ್ಸಂಹಾರದಕ್ಷಂ ವಿಧಿಭವ ವಿಹಗೇಂದ್ರೇಂದ್ರಚಂದ್ರಾದಿ ವಂದ್ಯಂ ರಕ್ಷೋವಕ್ಷೋವಿದಾರೋಲ್ಲ ಸದಮಲದೃಶಂ ನೌಮಿ ಲಕ್ಷ್ಮೀನೃಸಿಂಹಮ್॥1॥ ವಾಮಾಂಕಸ್ಥಧರಾಂಜಲಿಪುಟಪ್ರೇಮಾತಿ ಹೃಷ್ಟಾಂತರಂ ಸೀಮಾತೀತ ಗುಣಂ ಫಣೀಂದ್ರ ಫಣಗಶ್ರೀಮಾನ್ಯ ಪಾದಾಂಬುಜಮ್। ಕಾಮಾದ್ಯಾಕರ ಚಕ್ರಶಂಖ ಸುವರೋದ್ಧಾಮಾಭಯೋದ್ಯತ್ಕರು ಸಾಮಾದೀಡ್ಯ ವರಾಹ ರೂಪಮಮಲಂ ಹೇ ಮಾನಸೇಮಂಸ್ಮರ॥2॥ ಕೋಲಾಯಲಸದಾ ಕಲ್ಪಜಾಲಾಯ ವನಮಾಲಿನೇ ನೀಲಾಯ ನಿಜಭಕ್ತೌಘ ಪಾಲಾಯ ಹರಯೇ ನಮಃ॥3॥ ಧಾತ್ರಿಂ ಶುಭಗುಣ ಪಾತ್ರೀ ಮಾದಾಯ ಶೇಷವಿಬುಧಮಾದಾಯ। ಶೇಷೇತಮಿಮಮದೋಷೇ ಧಾತುಂ ಹಾತು ಚ ಶಂಕಿನಂ ಶಂಕೇ॥4॥ ನಮೋಸ್ತು ಹರಯೇ ಯುಕ್ತಿ ಗಿರಯೇ ನಾರ್ಜಿತಾರಯೇ। ಸಮಸ್ತ ಗುರವೇ ಕಲ್ಪತರವೇ ಪರವೇದಿನಾಮ್॥5॥

॥ ಇತಿ ಶ್ರೀಮದ್ವಾದಿರಾಜಯತಿ ವಿರಚಿತಂ ಶ್ರೀವರಾಹ ಪಂಚಕಂ ಸಂಪೂರ್ಣಂ ॥

ವಿದಾರಿತ ನಿಶಾಚರೌ ವಿಶದವೇದ (ಶ್ರೀ ವರಾಹ ಹಯಗ್ರೀವ ಸ್ತೋತ್ರಮ್)

ವಿದಾರಿತ ನಿಶಾಚರೌ ವಿಶದವೇದ ವಿದ್ಯಾಕರೌ ಪ್ರಪನ್ನ ಜನತಾವನೌ ಪ್ರಶಿಥಿಲೀ ಕೃತಾಶ್ವಾಸನೌ। ಮನೋರಮತಮಾಕೃತೀ

ಮದನಮೌನಿತಾಧಃಕೃತೀ ವರಾಹ ತುರಗಾನ ನೌ ವನಜಲೋಚನೌ ನೌಮ್ಯಹಮ್॥1॥ ವರಾಭಯದರಾಸಿಭಿರ್ವಲಯ ವಲ್ಗು ಹಸ್ತದ್ಯುಭಿಃ ಪ್ರಭೋಧಶುಭ ಪುಸ್ತಕ ಪ್ರಗುಣಶಂಖಮ್ಯಾ ಲ್ಯೈಯುತೌ । ಹರಿನ್ಮಣಿ- ಮಣಿದ್ಯುತೀ ಹರವಿತಾಯ ಮಾನಸ್ತುತೀ ವರಾಹತುಗಾನನೌ ವನಜಲೋಚನೌ ನೌಮ್ಯಹಮ್॥2॥ ಮನೋಜ್ಞಪದಸಾರಸೌ ಮಹಿತಜಾನುಮಧ್ಯೋರಸೌ ತ್ರಿರೇಖಶುಭ -ಕಂಧರೌ ತ್ರಿಜಗದಾದ್ಯತ ಶ್ರೀಕರೌ। ವಿಭೂಷಣಗಣಾಶ್ರಯೌ ವಿಮಲಹಾರ ಮಾಲಾಶ್ರಯೌ ವರಹತುರಗಾನನೌ ವನಜಲೋಚನೌ ನೌಮ್ಯಹಮ್॥3॥ ರಸಾಮೃತ ರಸಾಂಕಿತೌ ರಸಿಕಭಕ್ತ ವರ್ಗಾಂಚಿತೌ ಪ್ರಸಾದಭರಿತೇಕ್ಷಣೌ ಪ್ರಥಮಮಂಡಲೀಶಿಕ್ಷಣೌ। ವಿರುದ್ಧಧುರ ಸಂಗತೌ ಮಹಿತ ಶಕ್ತಿಕ್ಷೋಭಂಗುರೌ ವರಾಹ ತುರಗಗಾನನೌ ವನಜಲೋಚನೌ ನೌಮ್ಯಹಮ್॥4॥ ಸುಖಾನುಭವವಿಗ್ರಹೌ ಸುಜನಸಂಘ ರಕ್ಷಾಗ್ರಹೌ ವಿನೋದಜಿತದಾನವೌ ವಿಲಸದಾಕೃತಿಶ್ರೀನವೌ ಭವಾಬ್ದಿಭಯ ಭಂಜನೌ ನಿಜಪದಂ ಸದಾಧ್ಯಾಯಿನಾಂ ವರಾಹತುರಗಾನನೌ ವನಜ ಲೋಚನೌ ನೌಮ್ಯಹಮ್॥5॥ ವರಾಹ ತುರಗಾಸ್ಯಕಯೋರ್ವರನುತಿಂನಿಜೈರ್ವಶ್ಯಯೋಃ ಕೃಪಾನಿಲಯ ನೇತ್ರಯೋಃ ಕೃಪಣಭಕ್ತಹೃನ್ಮಿತ್ರಯೋಃ। ಯತಿಶ್ಯಮಲಶಾಂತಯೇ ಯಮಿವಿಮೃಶ್ಯಟೋಧಾಪ್ತಯೇ ವ್ಯಧತ್ತ ವಿಲಸತ್ಪದಾಂ ವಿಮಲ ವಾದಿರಾಜಭಿಧಃ॥6॥

॥ ಇತಿ ಶ್ರೀ ವಾದಿರಾಜ ಕೃತ ವರಾಹ ಹಯಗ್ರೀವ ಸ್ತೋತ್ರಂ ಸಂಪೂರ್ಣಂ ॥

## ವರಹ ವಿಠ್ಠಲ, ವರಹ ವಿಠ್ಠಲ ನೀ

**ವರಹ ವಿಠ್ಠಲ, ವರಹ ವಿಠ್ಠಲ ನೀ ಜಪ್ಪಿಸಲೆ ಬೇಕು । ವರಹ ವಿಠ್ಠಲನೀನೇ ದೈವ ಆದರೂ ಒಪ್ಪಬೇಕು ॥ಪ॥ಅಂದೇ ನನ್ನೊಳಗೆ ನಾನೇ ಮಗ್ನ ಎದುರಿಗೆ ಹೊಸ್ತಿಲ ಮೂರ್ತಿ । ಅಂದೇ ನನ್ನೊಳಗೆ ಧ್ಯಾನವೇ ಇಲ್ಲ ಏತಕೆ ಈ ಮೂರ್ತಿ ॥ಸಂದಿಲ್ಲದೆ ಇಡಿ ಸುಂದರ ಮೂರ್ತಿ ತಾನೇ ಹೇಳಿತಾಂಗ । ಕುಂದಿಲ್ಲದೇ ನೀ ಭಜಿಸಲು ಬೇಕು ವರಹ ವಿಠ್ಠಲನೀಗ ॥1॥ಏಕೋ ಭಯ, ಎಂತಹುದೋ ಸಂಶಯ, ತಿಳಿಯದೆ ನಾ ಕುಳಿತೆ । ಯಾಕಾದರು ಹೇಗಾಯಿತು ನಾ ಎಣಿಸಿ ಗುಣಿಸಿ ಮರೆತೆ ।ಸಾಕೆಂದರೂ ಒಳಗೆಲ್ಲೋ ಗುಣು ಗುಣು ಶ್ರೀ ವರಾಹ ಮೂರ್ತಿ । ಅಕೋ, ಇಕೋ, ಎತ್ತೇನು ಅದೇ ಇದೆ ಮರೆಯದೇ ಶರಣಾರ್ಥಿ ॥2॥ದಿನಗಳು ಕಳೆದರೂ, ಮರೆತೇನೆಂದರೂ, ಮತ್ತೆ ಮೂರ್ತಿ-ಕನಸು । ನಾನು ನಿಮ್ಮ ಜೊತೆ ಏನೋ ಹೇಳಬೇಕೆನುವ ಒಂಟಿ-ಮನಸು ।ಆಯ್ತು ಭೇಟಿ ಆ ನನ್ನ, ನಿಮ್ಮದು ಬೇಕೆನಿಸುತ್ತಿದೆ ಇನ್ನೂನು । ಎನಲು ಒಂದಿರುಳು ಕನಸು ಹುಂಬೇ ಹೂವಾದ ಮೂರ್ತಿ ಅಲ್ಲೂನು ॥3॥ನೀ ಯಾಕಪ್ಪ ಬರೀವಿಠ್ಠಲ ವರವರದವರಿಗೆ ಅಭ್ಯಾಸ । ಬಾಯಿ ಬಿಚ್ಚಿ ನಾ ಅದಕೆಂದೇ ಹೇಳಿದೆ, ಎಂದರೂ ನನಗೇನೋಭಾಸ ॥ಇದು ಬರೀ ಬಾಯಿ ಮಾತಲ್ಲ ಮೂರ್ತವಾಣಿಅದಕೇಳಿ ದಂಗು ನಾನು। ಬಯಸಿದಂತೆಲ್ಲಾ ತಿಳಿಸಿದಂತೆ ನಾ ಬಾರಿಸಬೇಕಿದೆ ವೀಣೆಯನು ॥4॥ಅಂದರೂ ಅಂದಿನಿಂದಿಂದಿನವರೆಗೆ ಅದೇ ಇದೆ ಸರಿ ಒಳ-ಹೊರಗೆ । ಮಗ್ಗಲೂರಗೊಡದಂತಹ ಸ್ಮರಣೆ, ಹೊಗೆ ಸುರಿಸುತ ಬೆಂಕಿಯ ಬಳಿಗೆ ।ಎಂದೂ ತಿಳಿಯದ ಮರ್ಮದ ಮಾತು ಅವನೆ ನಡೆಸಿಕೊಟ್ಟ ।ಇಂದು ಎಲ್ಲೆಲ್ಲೂ ತಾನೇತಾನಾದ ವರಹ ವಿಠ್ಠಲದಿಟ್ಟ ॥5॥**

## ಪಾದ ಸೇವೆಯ

**ಪಾದ ಸೇವೆಯ ಪಾಲಿಸೋ । ಪಂಕಜನಾಭ ॥ಪ॥ ಪಾದ ಸೇವೆಯ ತೋರೋ ವೇದಗೋಚರ ವ್ಯಾಘ್ರ ಭೂಧರ ವಿಹರಣ ಶ್ರೀಧರ ಹರಿ ನಿನ್ನ ॥ಅ.ಪ॥ಶೇಷವಾಯುಗಳತಿ ದೋಷವರ್ಜಿಸಿ ತನು ।ಶೋಷಿಸಿ ತಪನ ವಿಶೇಷವಾಚರಿಸೆ।ದೋಷರಹಿತ ಗುಣಭೂಷಾ ಶೇಷನಿಗೊಲಿದು । ಶೇಷಪರ್ವತ ಶಿರೋಭೂಷಣ ನೆನೆಸಿದಾ ॥1॥ ಬಲಿಚಕ್ರವರ್ತಿಯು ಬಲ ವೈರಿಯುಸು ಬಲು ಬಳಲಿಸಿ ರಾಜ್ಯವ**

ಛಲದಿಂದಾಕ್ರಮಿಸೇ।।ನಲಿದು ವಾಮನನಾಗಿ ಬಲಿಯ ದಾನವ ಬೇಡಿ ನೆಲನ ಈರಡಿ ಮಾಡಿ ಬಲಿಯ ಮೆಟ್ಟಿದ ಧೀರ।।2।। ಪೆಲಕಾಲ ಶಾಪದಿ ಶಿಲೆಯಾಗಿ ಗೌತಮ ಕುಲಸತಿಗೊಲಿದು ನಿರ್ಮಲ ತಪೋವನ ನುಸುಳಿದು ಆ ।। ಲಲನೆಯ ಕಲುಷವ ಖಂಡಿಸಿ । ಲಲನಾ ರೂಪವನಿತ್ತು ಸಲಹಿದ ಪಾವನ।।3।। ತರಣಿ ತನಯು ನೆಚ್ಚಗರಳ ಶರವು ಬೇಗ ।ನರಸುತ್ತಮಾಂಗಕೆ ಗುರಿಯಾಗಿ ಬರಲು ।। ಚರಣದುಂಗುಟದಿಂದ ಧರಣೀ ತಳವನೂರಿ । ನರನ ಶಿರವ ಕಾಯ್ದು ನರ ನಾರಾಯಣ ನಿನ್ನ ।।4।। ಪುಲಿನಾಮದಸುರನು ಛಲದಿ ಮಾಂಡವ್ಯಗೆಗಳವ ಪಿಡಿದು ಬಾಧೆಗೊಳಿಸೆ ಬೇಗದಲಿ ।। ಪುಲಿಗೆ ಮೋಕ್ಷವನಿತ್ತು ಪುಲಿಯ ಗಿರಿಯಲಿ ಮುನಿ-ಕುಲಜ ಮಾಂಡವ್ಯಗೆ ಒಲಿದ ವರದ ವಿಠಲ ನಾರಾಯಣ ।।5।।

ಮೋದ ಚಿನ್ಮಯಗಾತ್ರನೇ

ಮೋದ ಚಿನ್ಮಯಗಾತ್ರನೇ । ಆದಿ ಪೋತ್ರಿ । ಆದಿ ಕನಕಾಕ್ಷನನು ಕೊಂದೆ ಅಜನ ಮಗನ । ಮೇದಿನಿಯನುದ್ಧರಿಸಿದೆ ಘನೋದಕದಿಂದ ।ಜ್ಞಾನ ಸಾಗರ ಮಾಧವಾ ಜಯ ನಿನಗೆ ।।

ಅಸುರ ಸಂಧ್ಯಾಸುರತ

ಅಸುರ ಸಂಧ್ಯಾಸುರತ ಜಾತನಘಭರಿತನ ।ಕಾಶ್ಯಪೇಯ ದೈತ್ಯನ ಕನಕಾಕ್ಷಖಲನ ।
ಕೊಂದು ತಂದೆ ರಸಾತಲದಿಂದ ಧರೆಯ । ಜ್ಞಾನಸಾಗರ ಮಾಧವಾ ನಿನಗೆ ।।

ಶರಣು ವರಾಹಾಯಜ್ಞಾಂಗ

ಶರಣು ವರಾಹಾಯಜ್ಞಾಂಗ ಹೀಗೆ ।ಯರವು ಮಾಳ್ಪರೇ ಕರುಣಿ ಹೃದಯಾಂತರಂಗಾ ।।ಪ।।ಅನಾದಿ ಸಖನು ನೀ ಎನಗೆ ಈಗ ।ಆನ್ಯಾರೋ ನೀನ್ಯಾರೋ ಗುರುತರಿಯಧಾಂಗೆ । ಏನು ಕಾರಣ ಮಾಳ್ಪೆ ಹೀಗೆ ನಿಧಾನಿಸಿ । ಘನವೆ ಇದು ನಿನ್ನ ಕೀರುತಿಗೆ ।।1।। ಮಡದಿ ಭೂದೇವಿಯ ಮುಖಾವಯವೆ ।ಯಿಡದೆ ನೋಡುತಲಿತ್ತ ಮೊಗವಾದ್ಯೋ ಜೀಯಾ ।ಬಡವ ಭಕುತರಿಡುವ ಮೊರಿಯ ಕೇಳಿ । ವಡಿಯ ಪಾಲಿಸದಿರಲು ಗತಿ ಯಾರೋ ಜೀಯಾ ।।2।। ಆರ್ತರಕ್ಷಕನೆಂಬ ಬರಿದು ಬರಿದೆ ।ವಾರ್ತೆ ಮಾತ್ರವು ನಿಜವೊ ಯನಗೆ ತಿಳಿಯದು । ಕೀರ್ತಿವಂತನೆ ಯನಗೆ ವಲಿದು ಆಶಾ । ಪೂರ್ತಿಸೆ ನಿಜವೆಂಬೋ ಮ್ಯಾಲೆ ಸಲ್ಲುವದು ।।3।।ಖಳ ಕನಕಾಕ್ಷ ವಿದಾರಿ ಭೂ । ಲಲನೆ ಮನೋಹರ ದೀನರುದ್ಧಾರಿ । ಜಲಜ ಭವಾದ್ಯರಾಧಾರಿ ನಮ್ಮ । ಕುಲಸ್ವಾಮಿ ವೆಂಕಟ ಅನಿಮಿತ್ಯುಪಕಾರಿ ।।4।। ಸ್ವಾಮಿ ಸರಸಿ ತೀರವಾಸ ।ಕಾಮಿತ ಫಲ ದಾತ ಕರುಣಾ ವಿಲಾಸ ।ಭೂಮನೋಹರ ಭುವನೇಶಾ ಮಮ । ಸ್ವಾಮಿ ಗುರು ಗೋಪಾಲ ವಿಠಲ ಹೃದಯೇಶಾ ।।5।।

ನಿತ್ಯ ಸರಸೀ ತೀರ ವಾಸಾ ರಾಗ:ತೋಡಿ, ತಾಳ: ತ್ರಿವಿಡಿ

ನಿತ್ಯ ಸರಸೀ ತೀರ ವಾಸಾ ಪುರುಷೋತ್ತಮ ವರಾಹಾ ಸರ್ವೇಶಾ । ಸತ್ಯ ಸಂಕಲ್ಪನೆ ದೈತ್ಯ ಸನ್ನುತ ಪಾದಾ।ಭೃತ್ಯ ಜನರ ಪಾಲಾ । ನಿತ್ಯಾನಂದ ಫಲದಾ ।।ಪ।। ಚಿತ್ರ ವಿಚಿತ್ರ ಚಾರಿತ್ರ ಪುಣ್ಯಗಾತ್ರ ಸಂತರ ನಿಜ ಮಿತ್ರಾ । ಸೂತ್ರ ವಂದಿತನೆ ವಿಧಾತೃ ನಾಸಿಕ ಜಾತ । ಪಾತ್ರಿಯೆ ಶ್ರೀಮುಷ್ಣ ಕ್ಷೇತ್ರ ಮಂದಿರ ಕೋಲಾ । ರಾತ್ರಿ ಸಂಚರ ಕುಲಪ- ಕುಂಚಃನೇತ್ರ ಖಳಮದ ವಿಪಿನ ವೀತಿ ಹೋತ್ರ ಉಧೃತ । ಧಾತ್ರಿ ತ್ರಿನೇತ್ರ ಕೃತ ಸ್ತೋತ್ರ ಪಾತ್ರ ।।1।। ಗುಣತ್ರಯರಹಿತ ಮೋಹನ್ನ ಶುಕ್ಲ । ಮಣಿ ಮುಕ್ತ ನದಿಗೆ ಪ್ರಸನ್ನಾ ಮುನಿ ಕಾತ್ಯಾ ।

ಯನನ ಅರ್ಚನಿಗೆ ವಲಿದ ಧೀರಾ ದನುಜ ಚಂಡಾಂತಕ । ಗುಣಜ್ಞಾನ ಪರಿಪೂರ್ಣ ಮನದಿ ನಿನ್ನನು ನೆನೆವ ।ಜನರಘ ಜನನ ಜರೆ ಮರಣಾರ್ತಿಹರ ಅಂಜನೆತನಯ ।ಮನವನಜ ದಿನಕರನೆ ಗತಿ ಎನಗೆನೀನೇ ।।2।।ಛಲ್ಲಿಕಾರ ಮುನಿವಾಸಾಅಬ್ಜ ವಲ್ಲಿಕಾ ಚಿತ್ತ ವಿಲಾಸ ।ಮಲ್ಲಿಕ ಚಂಪಕಾ ಮಾಲಾಭೂಷಿತ ಕಂಠಾ । ಸಲ್ಲಲಿತಾಂಗ ಕೈವಲ್ಲದಾಯಕ ಕ್ರೋಡಾ ಖುಲ್ಲ ಖಳಕುಲದಲ್ಲಣ ಪ್ರತಿ । ಮಲ್ಲ ಮಲ್ಲ ವಿರೋಧಿ ಶ್ರೀ ಭೂನಲ್ಲ ಶ್ರೀ ಗುರುಗೋಪಾಲವಿಠಲ ಸಲಹೊ ನಮ್ಮೆಲ್ಲಾ ।।3।।

ಶ್ರೀಹರಿಯು ವರಹನಾದನು (ವರಹ ಚರಿತ್ರೆ) ರಾಗ:ಭೈರವಿ, ತಾಳ: ಅಟ್ಟ

ಶ್ರೀ ಹರಿಯು ವರಹನಾದನು ।ಶ್ರೀ ಹರಿಯು ವರಹನಾಗಲು ।ಆ ಹೇಮಗರ್ಭಾ ಪುರಹರ ಜೀಮೂತಾ ।ವಾಹನಾದಿ ಸುರರು ಹರುಷದಲಿ ।ತ್ರಾಹಿ ತ್ರಾಹೆನ್ನಲುತ್ಸಾಹದಿಂದಾ ।।ಪ।।ಮೂಜಗದೊಡೆಯ ಭಜಕ ವಿಬುಧ। ಕುಜಾ ವಿಲಾಸದಿ ನಿಜನಿಶೆಯಾದಿ । ರಾಜೀವನೇತ್ರೆಯಾರಾ ಜಲದೊಳು ಕಾ ।ಯಜ ಕೇಳಿಯಲ್ಲಿ ರಾಜಿಸಲು । ಅಜನ ನಿಜ ತನುಜ ವೇಗದ ।ಲಜಾತನಾ ಪಾದ ರಜವಧರಿಸ ।ಲು ಜವದಿಂ ಬರೆ ವಿಜಯ ಜಯರು । ರಾಜದ್ವಾರದಿ ಸುತೇಜದಿಂದಾ ।।1।।ವಿಗಡರಿರ್ವರು ವಿಗತ ಜ್ಞಾನದಿ । ಸುಗುಣಗಣರ ಬಗೆಯರಿಯಾದೆ ।ಪೋಗಾದಿರಿ ಯೆನುತಾಗ ಜರಿಯಲು। ಮಿಗೆ ಕೋಪೋದ್ರೇಕವಾಗಲಾಗಾ । ಜಗದ ಭಂಡರಿರಾ ಗರುವಾದಿ ಯ। ಮಗೆ ಈ ಪರಿ ಮಾತುಗಳಾಡುವರೆ । ಜಗತೀತಳದಿ ಯುಗಳರು ಸುರರಾ ।ಹಗೆಗಳಾಗೆನೆ ವೇಗದಿಂದಾ ।।2।। ಪರಿಯಿಂದಲಿ ಶಪಸ್ಯೆ ।ತಿ ಪ್ರಳಾಪದಿಂದ ವರ್ಗಳ ಪಾದಕ್ಕೆರಗಿ ।ಪಾಪಿಗಳೆಮ್ಮಯ ಅಪರಾಧ ಕ್ಷಮಿ । ಸಿ ಪೊರೆವುದೆನೆ ಕೃಪೆಯಿಂದಾ ।ಚಪಳವೀರೆ ಕಾಶ್ಯಪಿಯೊಳು ಮೂರು ।ವಪುಧರಿಸಿ ಸುರಪತಿ ವೈರದಿಂದಾ ।ವಪುವಾ ನಿಜರೂಪ ವೈದಿರೆನೆ ।ತಾಪಸರೊಳ್ ಕಶ್ಯಪನಿಗೆ ।।3।।ಚನ್ನೆ ದಿತಿಯುಲ್ಲಿ ಘನ್ನ ಪರಾಕ್ರಮ । ರುನ್ನತ ತೇಜದಿ ಭಿನ್ನವಿಲ್ಲದೆ ಹಿ ।ರಣ್ಯ ಕಶಪುಹಿರಣ್ಯಾಕ್ಷರೆಂಬಕಾಠಿಣ್ಯಹೃದಯರು ಜನ್ನಿಸಲು ।ಕಣ್ಣೊಳು ಕಿಡಿಗಳನ್ನು ಸೂಸುತ್ತಲಾ ।ರಣ್ಯದೊಳ್ಗೆ ಪಾವನ್ನ ಸಖ ಬಂದು ।ಉಣ್ಣುವಾ ತೆರದಿ ಮುನ್ನೆ ಸ್ವರ್ಗ ಮರ್ತ್ಯಾ ।ಪನ್ನಗಾರಿ ಲೋಕವನು ಉರುಹಿ ।।4।।ದುರುಳರೀರ್ವರು ದುರುಳತನದಿ ।ಸುರರನು ಹಿಡಿದು ಸೆರೆಯನಿಕ್ಕುತಾ । ನೊರಜಿನಂದದಿ ನರರೊರಸುತಾ । ಉರಗಾದಿಗಳ ತರಿವುತಾ । ತರಣಿ ಮಂಡಲ ರಿಯನಿಡುತಾ । ಉರವಣಿಸಿ ಚಂದಿರನ ಹಾವುತಾ ।ಸರಸಿಜಾಸನ ಸರಕು ಮಾಡದೆ । ವರಮುನಿಗಳ ಜರಿವುತಾ ।।5।।ಇಂದ್ರನವೋಡಿಸಿ ನೊಂದಿಸಿ ಅಗ್ನಿಯಾ । ಬಂಧಿಸಿ ಭಾಸ್ಕರ ನಂದನ ನೈರುತ್ಯಾ । ನಂದರ ತರದು ಹರಿದು ಸಿಂಧುರಾಜನ ನಿ। ರ್ಬಂಧಿಸಿ ವಾತನನ ನಿಂದಿಸುತಾ । ಇಂದು ಮೌಳಿ ಸಖನಿಂದ ಧನವನು ।ತಂದು ಈಶಾನ್ಯಗೆ ವಂದಿಸಿ ಈ ಪರಿ । ಯಿಂದ ಸಜ್ಜನರ ವೃಂದ ಕಂಗೆಡಿಸು । ತೊಂದು ದಿನಾ ಜಗದಿಂದ ಬಂದೂ ।।6।।ಜಾತರೂಪಾಕ್ಷ ಚೋರತನದಿ ವಸು । ಮತಿಯ ಕದ್ದು ರಸಾತಳದೊಳು ಇ । ರುತಿರಲಾಗದುಭೂತವಿದೇನೆ ।ನುತ ವಿಸ್ಮಿತರಾಗಿ ।ಚತುರಾನನ ಪಾರ್ವತೀಪತಿ ಪುರ । ಹೂತಾ ಮಿಕ್ಕ ಸುರಪತಿಗಳೊಂದಾಗಿ । ಅತಿಶಯದಿ ತ್ವರಿತ ಕ್ಷೀರಾಬ್ಧಿ । ಗೈ ತಂದು ಹರಿಯೇ ಗತಿಯಂದೂ ।।7।।ಲಕುಮಿಪತಿ ತಾರಕ್ಷವಾಹನ್ನ ಗೋ । ರಕ್ಷ ಕಮಲದಳಾಕ್ಷ ಸಜ್ಜನರಾ । ಪಕ್ಷ ದುರ್ಜನರಾ ಶಿಕ್ಷ ಸರ್ವ ವ್ಯಾಪ್ತ । ಇಕ್ಷು ಬಿಲ್ಲಿನಯ್ಯಾ ಧೋಷಜನೆ । ಮೋಕ್ಷದಾಯಕ ಕೇಳಿ ಕ್ಷಿತಿಯನು ಹೇ।ಮಾಕ್ಷ ಕದ್ದೊಯ್ದಾ ಪ್ರತ್ಯಕ್ಷದಿಂದೆಲ್ಲಾರು । ಈಕ್ಷಿಸಲು ದೇವತೀಕ್ಷಣದಿಂದ ನೀ । ರಕ್ಷಿಸೆನ್ನನು ಉಪೇಕ್ಷಿಸದೆ ।।8।।ಇಂತೆನುತ ಲಕ್ಷ್ಮೀಕಾಂತನ್ನ ಸ್ತುತಿಸಿ ।

**ನಿಂತಿರಾಲಾಗಾ ಅಚಿಂತ್ಯ ಅವ್ಯಕ್ತನು । ಅಂತರಿಕ್ಷದಿ ನಾಗಾಂತ ಕೇಸರಿ ಅ । ನಂತ ಸೌದಾಮಿನಿ ಕಾಂತಿಯಿಂದಾ । ಚಿಂತಿಸದಿರಿ ನೀವೆಂತೆನುತಲಿ ಜ । ಯಂತದನುಜರ ಸಂತತಿಗಳಿಗೆ । ಸಂತೋಷವಿತ್ತು ನಿರಂತರದಿಂದಲಿ । ಸಂತೈಸಿ ಪೋದಾ ವೇದಾಂತವೇದ್ಯ ।।9।।ಪದುಮಜಾನನಾಸದಿಂದ ಸಂಭವಿಸಿ । ಆದಿ ಹೇಮಾಕ್ಷನ ?ಸದವ್ತೆ ರೂಪಾದಿ । ಮೇದಿನಿಚೋರ ಸವರದುವೆ ನೆನುತಾ । ಸದಮಲಾನು ನಡದನಾಗಾ । ಆದಿತಿತನಯ ಕದನಗೋಸುಗ । ಮದದಿ ಹರಿಯಾ ಯದುರು ಬರಲು । ಕಾದಿದಾರೀರ್ವರು ಪಾದರಸದಂತೆ । ಚಿದುರತನದಿ ಮೋದದಿಂದಾ ।।10।।ಪುಂಡರೀಕಾಕ್ಷನುದ್ದಂಡ ಪರಾಕ್ರಮ । ಖಂಡಲರಿಯೆ ಮುಂಕೊಂಡು ಶಿರವನೆ । ಖಂಡ್ರಿಸಿ ಮುದದಿ ಚೆಂಡಾಡಿದನುವೆ । ದಂಡಾಧೀಶರಣಮುಂಡಲದಿ । ಹಿಂಡು ಸುರರೊಡಗೊಂಡು ಶ್ರೀ ಹರಿಯಾ । ಮುಂಡಿಗೆ ಕುಸುಮ ದಂಡಿಯಾಸುರಿಸೆ । ಗಂಡುಗಲಿ ವೆಂಕಟಾದ್ರಿವಿಠಲ ಕೈ । ಕೊಂಡು ಸಲಹಿದ ತೊಂಡರನು ।।11।।**



## 37. ಸ್ವರ್ಣಗೌರೀ ವ್ರತ

**ಸುಪ್ರಭಾತವು ನಿನಗೆ ತಾಯೆ ಏಳಮ್ಮ** **ರಾಗ: ಭೌಳಿ**

ಸುಪ್ರಭಾತವು ನಿನಗೆ ತಾಯೆ ಏಳಮ್ಮ ಏಳಮ್ಮ ಬೆಳಗಾಯಿತು ।।ಪ।। ಜಗವೆಂಬ ತೊಟ್ಟಿಲ ತೂಗುವ ತಾಯೆ। ಮುಗಿಯಲಿಲ್ಲವೇ ನಿನ್ನ ಯೋಗನಿದ್ರೆ।। ಉದಯರವಿ ಕಿರಣಗಳ ಸ್ಪರ್ಶದಿಂದಾ। ಕಮಲಗಳು ಅರಳಿ ನಗುನಗುತಲಿಹುದು ನೋಡಮ್ಮ। ನಿನ್ನ ಕರುಣೆಯ ಕಿರಣಗಳ ಸ್ಪರ್ಶತಾಯೇ। ನಮ್ಮ ಹೃದಯಕಮಲಗಳು ಕಾದಿಹವು ಏಳಮ್ಮ।। ಹಕ್ಕಿಗಳ ಕಲರವದ ಧ್ವನಿ ಕೇಳಿ ಬರುತಿಹುದು। ಮಂತ್ರಘೋಷವು ಕೇಳಿಸುತಲಿಹುದು। ಅಕ್ಕರದಿ ನಿನ್ನ ಕಿಂಕರರನ್ನುದ್ಧರಿಸಲು ಚಕ್ರಧಾರಿಯ ಸೋದರಿಯೆ ಏಳಮ್ಮ।। ಮಾಮರದಿ ಕೋಗಿಲೆಯು ನಿನ್ನ ಕೂಗುತಿಹುದು। ನವಿಲು ನಿನಗಾಗಿ ನರ್ತಿಸುತಲಿಹುದು।। ಕುಮಾರಿ ಪ್ರಿಯ ಸತಿಯೆ ಸಾಮಜಗಮನೆಯೆ। ಕಾಮಿತಪ್ರದಾಯಿನಿಯೆ ಕಣ್ಣು ತೆರೆಯಮ್ಮ। ಮಂಗಳವಾದ್ಯಗಳು ಮೊಳಗುತಿಹುದು। ಗಂಧರ್ವರು ಗಾನವ ಮಾಡುತಿಹರು।। ಅಂಗನೆಯರೆಲ್ಲರೂ ಮಾಂಗಲ್ಯಭಾಗ್ಯವ ಬೇಡಿ। ಸೆರಗೊಡ್ಡಿ ನಿಂದಿಹರು ಏಳಮ್ಮ।। ಪರಮ ಪಾವನವಾದ ನಿನ್ನ ಪಾದ ದರುಶನಕೆ। ಸುರರು ಮುನಿಗಳು ಬಾಗಿಲಲಿ ಕಾಯುತಿಹರು।। ಪರಶಿವನಸಹಿತ ಪರ್ವತರಾಜಕುವರಿಯೇ। ನಿದ್ರೆಯಿಂದೆದ್ದು ದರುಶನವ ನೀಯೆ ತಾಯೆ। ಗಂಗಾಧರನ ಆಲಿಂಗನದಲಿ ಮೈಮರೆತು। ಮಂಗಳಾಗಿಯೆ ನೀನು ನಿದ್ರಿಸಿದರೆ। ಸರ್ವರನೂ ಸಂರಕ್ಷಿಸುವರ್ಯಾರಮ್ಮ। ಸರ್ವ ಮಂಗಳದೇವಿ ಎದ್ದು ಬಾರಮ್ಮ। ಪರಿಮಳೋದಕದಿ ನಿನಗಭಿಷೇಕವನು ಮಾಡಿ। ಪರಿಪರಿಯ ವಸ್ತ್ರಾಭರಣಗಳ ತೊಡಿಸಿ। ಧೂಪ ದೀಪ ನೈವೇದ್ಯ ನೀಲಾಂಜನವ ಮಾಡಿ ಕಣ್ತುಂಬ ನೋಡಲು ಕಾಯುತಿಹೆವಮ್ಮ।। ಸೃಷ್ಟಿ ಸ್ಥಿತಿಲಯ ಕಾರಿಣಿಯೆ ನಿನ್ನಯ ದಯಾದೃಷ್ಟಿಯು ನಮ್ಮ ಮೇಲೆ ಹರಿಸಲು ಶ್ರೀಕೃಷ್ಣಾನಂದ ಸೋದರಿಯೆ ಏಳಮ್ಮಾ। ಕಾರೇಂದುವದನೆ ಶಿವೇ ಬೆಳಗಾಯಿತಮ್ಮ। ಸಕಲ ಶಕ್ತಿಗಳ ರೂಪೇ ದುರ್ಗಾಪರಮೇಶ್ವರಿಯೇ ಏಳಮ್ಮ। ಅಂಬಾ ಭವಾನಿಯೆ ಏಳಮ್ಮ।।

**ಏಳಮ್ಮ ಬೆಳಗಾಯಿತು ಬೆಳಗಾಯಿತೇಳಮ್ಮ** **ರಾಗ: ಮೋಹನ**

ಏಳಮ್ಮ ಬೆಳಗಾಯಿತು ಬೆಳಗಾಯಿತೇಳಮ್ಮ। ಬಿಸಿಲು ಮೈದೂಡುತಿದೆ ಏಳಮ್ಮ ಪಾರ್ವತಿ ದೇವಿ। ದಾಸರೆಲ್ಲರು ನಿನ್ನ ಪಾದಪೂಜೆಗೆ ಬಂದು। ದ್ವಾರದಲಿ ಕಾದಿಹರು ಎದ್ದು ದಯೆ ತೋರಮ್ಮ। ಏಳಮ್ಮ ಬೆಳಗಾಯಿತು ಏಳಮ್ಮ ಪಾರ್ವತಿ ದೇವಿ।।1।। ಶಿವನ ಭಕ್ತಳಾಗಿ ಶಿವನನ್ನೇ ವರಿಸಿದಿ। ಶಿವನ ಸನ್ನಿದಿಯಲಿ ನೆಲೆಸಿದೆ ದೇವಿ। ಏಳಮ್ಮ ಪಾರ್ವತಿ ದೇವಿ।

ದಕ್ಷನ ಮಗಳಾಗಿ ಶಂಕರನ ಸತಿಯಾಗಿ। ಮುರುಗನ ಮಾತೆಯಾಗಿ ಪ್ರೀತಿ ತೋರಿದೆ ದೇವಿ। ಏಳಮ್ಮ ಬೇಳಗಾಯಿತು॥2॥ ನಾರದಾ ಮುನಿಗಳು ಹಾಡುತಾ ಬರುವರು। ರಂಭೆ, ಮೇನಕೆಯರು ನಾಟ್ಯವಾಡುವರು। ಏಳಮ್ಮ ಸಿಂಹವಾಹಿನಿಯೆ। ದೇವಾದಿ ದೇವತೆಗಳು ನಿನ್ನ ಪೂಜೆಗೆ ಎಂದು। ವಿಧವಿಧ ಫಲಪುಷ್ಪ ತಂದು ಕಾದಿಹರಮ್ಮ ಏಳಮ್ಮ ಪಾರ್ವತಿ ದೇವಿ॥3॥ ಶಿವನ ಮಾತನು ಮೀರಿ ದಕ್ಷ ಯಜ್ಞಕ್ಕೆ ಹೋದೆ। ತಂದೆ ನಿಂದೆಯ ಕೇಳಿ ಯಜ್ಞಕುಂಡದಿ ಧುಮುಕಿದೆ। ಏಳಮ್ಮ ಬೆಳಗಾಯಿತು॥ ಯಜ್ಞಕುಂಡದಿ ಧುಮುಕಿ ಜಗಕೆ ಮಹಿಮೆಯ ತೋರಿ। ದಾಕ್ಷಾಯಣಿ ಎಂದು ಹೆಸರು ನೀ ಪಡೆದೆ। ಏಳಮ್ಮ ಕುಕ್ಕೆ ಸ್ವಾಮಿಯ ಮಾತೆ ಬೆಳಗಾಯಿತೇಳಮ್ಮ।

## ಕೈಲಾಸ ಶಿಖರದಲಿ ಗೌರಿಯ

ಕೈಲಾಸ ಶಿಖರದಲಿ ಗೌರಿಯ ಸಮೀಪದಲಿ। ನೀಲಕಂಠನ ಇರವು ನಿಷ್ಠೆಯಿಂದ। ಬಾಬಷಣ್ಮುಖ ಬಂದು ಪಾರ್ವತೀ ಸಮೀಪದಲಿ। ಲೀಲೆಯೊಳು ಶಿವನೊಳಿತೆಂದು ನುಡಿದ॥1॥ ಸಕಲ ಧರ್ಮಂಗಳನು ಚೆನ್ನಾಗಿ ಕೇಳಿದನು। ಅಕಳಂಕನಾಗಿ ಯಮುನೆಯಲಿ ಮಿಂದು। ಸಕಲ ಸೌಭಾಗ್ಯವನು ಸಂತಾನ ವೃದ್ಧಿಯನು। ಸಕಲ ಸೌಖ್ಯದಲಿ ಸಜ್ಜನರಿಗೆ॥2॥ ಅನುವ ಮಾಡೋದೊಂದು ಘನವಾದ ಸುವ್ರತವ। ತನಗೆ ಪೇಳೆಂದ ತನುಜನೊಡನೆ। ಮದನಾರಿ ಹೇಳಿದನೆ ಷಣ್ಮುಖನಿಗೆ ಘನ ತರದ ಸ್ವರ್ಣಗೌರಿ ವ್ರತವನು॥3॥ ಬಾಗಿನಂಗಳ ಕೊಟ್ಟು ಕಥೆಯನು ಕೇಳಿ। ಬೇಗದಿಂ ಮಂಗಳಾರತಿಯ ಮಾಡಿ। ನಾಗಭೂಷಣನರಸಿಗೆ ಬೇಗ ವಂದಿಸಿ ಆಗ ಪೂಜೆಯನು ಮಾಡಬೇಕು॥5॥ ಪರಿಶುದ್ಧವಾಗಿ ಬ್ರಾಹ್ಮಣನೂತ ಹೊಸನೂಲ। ಹರುಷದಿಂ ಹದಿನಾರು ಎಳೆಯನಿಟ್ಟು। ಹುರಿಯು ಮಾಡಿದ್ದೊಂದು ಸೂತ್ರವನು ಹಸ್ತದಿ। ಧರಿಸಿ ಆ ಕ್ಷಣದಿ ಕರದಲಿ ನಲಿಯುತ॥6॥ ತನ್ನ ಕರದಲಿ ಕಟ್ಟಿ ಚೆನ್ನಾಗಿ ಮೆರೆಯುತಿರೆ। ಉನ್ನತದಿ ಮಾಡಿದ ಅಪರಾಧವನ್ನು। ಮನದ ಉನ್ಮಾದವನು ಪರಿಹರಿಸಿ ಭಕುತರ। ಆನಂದದಿ ಕಾಯ್ವಳು ಶ್ರೀಗೌರಿಯು॥7॥ ಅನ್ನಪೂರ್ಣೇ ಕಥೆಯ ಕನ್ನಡದಿ ಪೇಳಿದೆ। ಭಕ್ತಿಯಿಂದಲಿ ಹೇಳ್ ಕೇಳಿದವರ್ಗೆ। ಪುತ್ರ ಸಂತಾನವನು ಅಷ್ಟಸೌಭಾಗ್ಯವನು ಕೊಟ್ಟು ರಕ್ಷಿಸುವಳು ಮಿತ್ರೆಗೌರಿ॥8॥ ಜಯಮಂಗಳಂ ನಿತ್ಯ ಶುಭಮಂಗಳಂ॥

## ಇಂದು ಗೌರಿಹಬ್ಬ — ರಾಗ: ನವರಸಕನ್ನಡ

ಇಂದು ಗೌರಿಹಬ್ಬ। ತಂದೆ ಕರೆಯಲಿ ಬಂದಾ। ಚಂದ್ರಿಕೆಯ ಸೀರೇ ನೆರಿದುಟ್ಟು ಬಂದೇನೂ। ಚಂದ್ರಶೇಖರನೇ ಕಳೂಹಿಸೂ॥ಪ॥ ಮತ್ತೆ ಗೌರೀಹಬ್ಬ। ಅಪ್ಪ ಕರೆಯಲಿ ಬಂದಾ।ಮುಕ್ಕಣ್ಣೇಶ್ವರನೇ ಕಳುಹಿಸೂ॥1॥ ಪಟ್ಟೆಸೀರೇಗೆ ಹೆಚ್ಚಿನ ಬಂಗಾರಕ್ಕೆ ಇಷ್ಟಕ್ಕೆ ನಿನ್ನ ತೌರೂ ಬಡವಾರೂ॥2॥ ಬಡವಾರು ಗೌರಾಯೀ। ಈಗೇತಕ್ಹೋದಿ ತೌರೂರಿಗೇ॥ ಮಿತ್ರೆ ನಿನ ತೌರೀಲೀ। ಅಂಬಲಿ ತುಂಬೆಸೊಪ್ಪೂ। ಇನ್ನೆಷ್ಟು ದಿವಸಾ। ಬಯಸೀದೆ॥3॥ ಚಕ್ಕುಲಿ ಕರ್ಜಿಕಾಯಿ ನಿತ್ಯವೂ। ಬೇಡ್ಯಾನೂ ರಚ್ಚೆಯಿಕ್ಯಾನೂ ಬೆನವಣ್ಣಾ। ಬೆನವಣ್ಣಾ ಗೌರಾಯೀ ಈಗೇತಕ್ಹೋದೀ ತೌರೀಲೀ॥4॥ ಹಾಲು ಅನ್ನವನುಂಡು। ಹಾಸು ಮಂಚದಮೇಲೆ। ಬಾಲಾರ ನೆತ್ತೀ ಸುಖನಿದ್ರೇ। ಸುಖನಿದ್ರೆ ಗೈಯುವಾಗ। ಈಗೇತಕ್ಹೋದಿ ತೌರೀಲೀ॥5॥ ಹಾಲನ್ನಯಿಲದಿದ್ದರೆ ನೀರನ್ನಉಂಡೇನೂ। ನೀರನ್ನ ವುಂಡೂ। ದಿನ ಮೂರು ದಿನ ಮೂರಲಿ ಬಂದೇನೂ ಮುಕ್ಕಣ್ಣೇಶ್ವರನೇ। ಕಳುಹಿಸೂ॥6॥ ತುಪ್ಪ ಅನ್ನವನುಂಡು ತೂಗು ಮಂಚದಮೇಲೆ। ಪುತ್ರರನೆತ್ತೀ ಸುಖನಿದ್ರೆ। ಸುಖನಿದ್ರೆ ಗೈವಾಗ। ಈಗೇತಕ್ಹೋದೀ। ತೌರೀಗೇ॥7॥ ತುಪ್ಪನ್ನ ಇಲ್ಲದಿದ್ದರೆ ಉಪ್ಪನ್ನ ಉಂಡೇನೂ। ಉಪ್ಪನ್ನ ಉಂಡೂ ದಿನವಾದರೂ। ದಿನಮೂರಲಿ ಬಂದೇನೂ। ಮುಕ್ಕಣ್ಣೇಶ್ವರನೇ ಕಳುಹಿಸೂ॥8॥

## ಬಳೆಯನಿಡಲಿ ಬಂದ ಬಳೆಗಾರನು

ಬಳೆಯನಿಡಲಿಬಂದ ಬಳೆಗಾರನು ಬಳೆಯ॥ಪ॥ ಸತ್ಯ ಗಣಪತಿ ಸರಸ್ವತಿ ಗುರುಹಿರಿಯರ। ಅರ್ತಿಯಿಂದ ಸ್ತುತಿಸಲು ಮನದಿ। ಮುತ್ತೈದೆತನದ ಬಳೆಯನಿಟ್ಟ ಪದವನು। ವಿಸ್ತರಿಸಿ ಸಿದ್ದನ್ನು ಹೇ ಜನರೇ ಕೇಳಿ॥ಅ.ಪ.॥ ಬಾಹೋ ಬಳೆಗಾರನ ಕಂಡು ಬಾಲಕಿಯರು ಬಾಲಗೆ ಹಾಲೆರೆಯುವದು ಮರೆತು। ಈಗ ನಮ್ಮವರ ಮನೆಗೆ ಕರಿಸಬೇಕನುತಲಿ। ಹೋಗಿ

ಹೇಳಿದರು ಪಾರ್ವತಿ ದೇವಿಗೆ॥1॥ ಬಂದ ಬಳಿಗಾರಗೆ ತಂದು ಗದ್ದಿಗೆಯ ಹಾಕಿ। ಕಂದಗೆ ಹಾಲೆರೆಯುವದು ಮರೆತು। ಇಂದು ನಮ್ಮವರ ಮನೆಗೆ ಕರಿಸಬೇಕನುತಲಿ। ಬಂದು ಹೇಳಿದರು ಪಾರ್ವತಿ ದೇವಿಗೆ॥2॥ ಅಕ್ಕ ಗೌರವ್ವನ ಚತುರ್ಭುಜ ಹಸ್ತಕೆ। ಕಸ್ತೂರಿಯ ಲೇಪಿಸಿ ಅಂದದಿ। ಒಪ್ಪವುಳ್ಳ ಹೊನ್ನ ಬಳೆಯನಿಡಲಿ ಮೆಚ್ಚಿ। ಸಪ್ತಾಂಗಗೆ ಉಡುಗರೆಯ ಕೊಟ್ಟರು॥3॥ ನಾರಿ ಗೌರವ್ವಗೆ ನಾಲ್ವತ್ತು ತೋಳಿಗೆ। ಶ್ರೀಗಂಧವ ಲೇಪಿಸಿ ಅಂದದಿ। ಆಯುವುಳ್ಳವನ ಬಳೆಯನಿಡಲಿ ಮೆಚ್ಚಿ। ದೇವಾಂಗಗೆ ಉಡುಗೆರೆಯ ಕೊಟ್ಟರು॥4॥ ನೆನೆ ಅಕ್ಕಿ ನೆನೆಗಡಲಿ। ಗೊನೆಬಾಳೆಯ ಹಣ್ಣು। ಬಳಿಯ ಪೂಜಿಸಿದರು। ಅರ್ಥಿಯಿಂದಲೆ॥5॥

### ಹರನು ಪಾರ್ವತೀದೇವಿ ಪರಮ ಸಂತೋಷದಲಿ (ಸಂವಾದ)

ಹರನು ಪಾರ್ವತೀದೇವಿ ಪರಮ ಸಂತೋಷದಲಿ ಸರಸವಾಡುತ ತನ್ನ ಪುರುಷನೊಡನೆ। ವರಭಾದ್ರಪದ ಶುದ್ಧ ತದಿಗೆ ನಾಳೆದಿವಸ ಅರಸರೇ ತೌರೂರಿಗ್ಹೋಗಿ ಬರುವೆ॥1॥ ಇಲ್ಲಿಂದ ಹೋಗೋಳೆ ಅಲ್ಲಿ ನಿನಗ್ಯಾರುಂಟು ಚೆಲ್ವೆಗಂಗಳ ಚತುರೆ ತಿಳಿದುಪೇಳೆ। ಎಲ್ಲರ್‍ಯಾತಕೆ ಸ್ವಾಮಿ ಮೂರು ದಿನವಿದ್ದು ನಿಮ್ಮಡಿ ಸೇವೆಗೆ ಒದಗಿ ಬರುವೆ॥2॥ ಮೂರು ದಿನ ಐದು ದಿನ ಮೀರಿದರೆ ಏಳುದಿನ ದಾರಿನೋಡುತಲಿರುವೆ ದೇವಿ ಕೇಳೆ। ಬಾರದಿದ್ದರೆ ನಿನ್ನ ಮೀರಿದವಳೆಣಿಸುವೆ ನೀರೇ ನೀ ಪೋಗೆಂದ ನಿಜಮೂರ್ತಿಯು॥3॥ ಕರಿಮುಖನ ಒಡಗೊಂಡು ಕರೆವುದಕೆನಾಬರುವೆ ತಿಳಿದು ಉಪಚಾರಗಳ ತಿಳಿಯ ಹೇಳೆ।ತಿಳಿದಂದರಾ ಮೂರು ಲೋಕವಿಲ್ಲಾ ಸ್ವಾಮಿ ಹುಲಿಯ ಚರ್ಮದ ಹೊದಿಕೆ ಭಸ್ಮಾಂಗವೂ॥4॥ ಹಳ್ಳದಲಿ ಮೈ ತೊಳೆದು ಒಳ್ಳೆ ಮಡಿಯನು ಉಟ್ಟು ಅಲ್ಲಲ್ಲಿ ಶಿವನ ಪೂಜೆಗಳ ಮಾಡಿ। ಒಳ್ಳೆತನದಲಿ ಹೋಗಿ ಶಿವನ ಹೆಂಡತಿಯಾದ ಗುಳ್ಳದಾ ಗೌರಿಗಾರುತಿ ಎತ್ತಿರೇ॥5॥ ಜಯತು ಭವಾನಿಗೆ ಜಯತು ಕಲ್ಯಾಣಿಗೆ ಜಯಜಯತು ಸಕಲ ಗುಣ ಸಂಪನ್ನೆಗೆ। ಜಯತು ಮೂರ್ಲೋಕಕ್ಕೆ ಬೇಡಿದ್ವರಗಳ ಕೊಡುವ ಪಾರ್ವತಿ ಪರಮೇಶ್ವರಗೆ ಜಯಮಂಗಳಂ ನಿತ್ಯ ಶುಭಮಂಗಳಂ॥6॥

### ಕಾಳೆ ಮುತ್ತಿನ ಕಾಳೆ — ಜಾನಪದ ಧಾಟಿ

ಕಾಳೆ ಮುತ್ತಿನ ಕಾಳೆ ರಾಯಾರ ನಡು ಬೀದಿ ಭೋರೆಂಬೊ ವಾದ್ಯ। ಎಸೆದಾವು ಎಸೆದಾವು ಶಿವರಾಯ ಹೋಗಿ ಬರುತೀನಿ। ತವುರೀಗೆ॥ಪ॥ ನೀ ಹೋದರೆ ಚಿಕ್ಕ ಬೆನಕನು ಬರುವ ಮತ್ತೆ ಈ ಹಬ್ಬ ನಮಗಿಲ್ಲ ನಮಗಿಲ್ಲ ಎಲೆ ಗೌರಿ ಮತ್ತೆಲ್ಲಿ ಹೋದಿ ತವುರೀಗೆ। ಚಿಕ್ಕ ಬೆನವಣ್ಣನು ಚಕ್ಕುಲಿಯಾ ಬೇಡ್ಯಾನು ರಚ್ಚೆ ಮಾಡ್ಯಾನು ಕರಿಮುಖ॥ ಎಲೆ ಗೌರಿ ಮತ್ತೆಲ್ಲಿ ಹೋದಿ ತವುರೀಗೆ। ಚಿಕ್ಕ ಬೆನವಣ್ಣನ್ನು ಚಕ್ಕುಲಿಯ ಬೇಡಿದರೆ ರೊಟ್ಟಿಯಾ ಕೊಟ್ಟು ಮೂರುರೊಟ್ಟಿಯಾ ಕೊಟ್ಟು ದಿನ ಮೂರಲಿ ಬರುತೀನಿ। ಶ್ರೇಷ್ಠೀ ಈಶ್ವರರೇ ಕಳುಹೀರಿ ರಾಯ ಬೆನವಣ್ಣನು ಹೂರಿಗೆಯ ಬೇಡಿದರೆ ಹುಳಿದೋಸೆಕೊಟ್ಟು ದಿನ ಮೂರು ದಿನ ಮೂರಲಿ ಬರುತೀನಿ ಸೋಮಶೇಖರರೆ। ಕಳುಹಿರಿ। ಎನುತಾಲಿ ಭಾಮೇ ಗೌರಮ್ಮ ನುಡಿದಾಳು। ಪಟ್ಟಿಯಾ ಸೀರೆಯ ವಪ್ಪದಲಿ ಬಿಚ್ಚಿಟ್ಟು ಬಂಗಾರದ ವಡವೇಯ ಸೊಡಲಿಸಿ। ಇಟ್ಟ ಬಂಗಾರ ಸೊಡಲಿಸಿ ಭಾಮೆ ಗೌರಮ್ಮ ಬಾಲನ ಎತ್ತಿ ನಡೆದಾಳು ಪಟ್ಟಿಯ ಸೀರೆಗೂ ಹಿಟ್ಟಿನ ಬಂಗಾರಕ್ಕು ಇಷ್ಟಕ್ಕು ನಮ್ಮ ತವರು ಬಡವಾರೇ ಶಿವರಾಯ ಹೋಗಿ ಬರುತೀನಿ ತವರೀಗೆ॥ ಸಾಲಿಯ ಸೀರೆಗು ಸೋಮೇ ಬಂಗಾರಕ್ಕು ಆಯಕೆ ನಮ್ಮ ತವರುಬಡವರೆ ಶಿವರಾಯ ಹೋಗಿಬರುತೀನಿ ತವರೀಗೆ। ತೊಟ್ಟಿಲನೆ ಹೊತ್ಕೊಂಡು ತೌರುಬಣ್ಣ ಉಟ್ಟುಕೊಂಡು ಅಪ್ಪಕೊಟ್ಟ ಎಮ್ಮೆ ಹೊಡಕೊಂಡು ಗೌರಮ್ಮ ಹೊಕ್ಕಳು ತನ್ನ ತವರನ್ನು॥

### ಗಜಮುಖನಂಘ್ರಿಗೆ ಎರಗುವೆನು — ರಾಗ: ಆನಂದಭೈರವಿ-ಛಾಪುತಾಳ

ಗಜಮುಖನಂಘ್ರಿಗೆ ಎರಗುವೆನು। ಅಜನ ರಾಣಿಯನು ಭಜಿಸುವೆನು। ನಿಜದ ಭಕ್ತಿಯಲಿ ನೆನೆವೆನು। ನೆನೆವೆನು ಶ್ರೀ ಗೌರಿ ಶಂಕರನ। ನಿಜ ಚರಿತ್ರೆಯನು ಪೊಗಳುವೆ॥1॥ ಫಾಲಾಕ್ಷನು ಪಾರ್ವತಿ ಗೌರಿಯು। ಪರಮಾನಂದೊಳಿರುತಿರಲು ಕಾಲವನರಿತಾ ಗವುರೀಯು। ಗೌರೀದೇವಿಯು ತನ್ನರಸರ। ಬೇಡಿದಳೇ ತೌರುಮನೇಗಳ॥2॥ ಸತಿಪತಿಯರು

ಸಂತೋಷದಲಿ। ಸಂತರನು ನೋಡುತಲಿರದೆ। ಅತಿಶಯವೇನೇ ತವುರಿನ। ತೌರುಮನೆ ಸಲಿಗೆ ಕಂಡರೆ। ಸ್ಮರಿಸುವೆಯಾ ಎನ್ನ ಮನದಲ್ಲಿ॥3॥ ಲೋಕಕೆ ಪಿತನು ನೀವೆಂಬೊರು ಲೋಕಕೆ ಮಾತೆಯು ನಾನೆಂಬೊರು। ಲೋಕ ರಕ್ಷಕಿಯೆಂದು ಪೊಗಳುವವರು। ಪೊಗಳುವ ಭಕ್ತರ ಮನೆಯೊಳಗೆ। ನಾಲ್ಕೆದಿನವಿದ್ದು ಬರುವೇನು॥4॥ ತಿಂಗಳು ನೀನಲ್ಲೆ ನಿಂತರೆ ನಾನು। ಕಂಗಳ ಬಿಡುವಂತಾಗುವುದು। ಜಗಂಗಳು ಮುಳುಗಿದವೋ ಎನಿಸುವುದು ಎನಿಸುವುದು ಹೆಂಗಳರನ್ನೆ ಇನ್ನೆಂತು ಕಳುಹಿಸಲೇ ತಿಳಿಯದು॥5॥ ಗಜಮುಖ ಷಣ್ಮುಖವರಿಬ್ಬರ। ಸಣ್ಣವರನು ಸಲಹಲಿ ಬೇಕು। ಬಣ್ಣ ಬಂಗಾರ ತರಬೇಕು ತರಬೇಕು ಮದುವೆ ದಿವಸಕೆ। ಹೆಣ್ಣುಗಳ ನೋಡಿ ಬರಬೇಕು॥6॥ ಮುಪ್ಪಿನ ಎತ್ತನು ಹತ್ತಬೇಕು ಕಪ್ಪರವನು ಹಿಡಿದಿರಬೇಕು। ಒಪ್ಪೊತ್ತು ತಿರಿದು ಉಣಬೇಕು ಉಣಬೇಕು ಪರರಧೀನದಿ ಊಳಿಗವ ಮಾಡುತ್ತಿರಬೇಕು॥7॥ ಕಳುಹುವೆನು ನಾಳಿನ ದಿನದಲಿ। ಕರಹೊತ್ತನು ನಾ ಕಾಣೆನು। ಕರಿಮುಖ ಗಣಪನ ಕಳುಹುವೆ। ಕಳುಹುವೆನು ಕಂದನು ಸಹಿತ ಉಳಿಯದೆ ಬಾರೆಂದು ನುಡಿದಾನು॥8॥ಪಟ್ಟೆ ಸೀಗೆಗಳಿಷ್ಟ್ಯಾತಕೆ। ಪಟ್ಟೆ ರವಿಕೆಗಳಿಷ್ಟ್ಯಾತಕೆ। ಕುಚ್ಚುಮೆಂಟ್ಯಗಳು ಇವು ಯಾಕೆ। ಇವು ಯಾಕೆ ಮಕ್ಕಳಿರಾ ನೀವ್। ಬಚ್ಚಿಡಿರೆಂದು ನುಡಿದಾನು॥9॥ ತೂಕದ ಒಡವೆಗ ಳಿಷ್ಟ್ಯಾತಕೆ। ಏಕಾವಳಿ ಸರಗಳಿಷ್ಟ್ಯಾತಕೆ। ನಾಲ್ಕು ಮೇಂಟ್ಯಗಳು ಇವು ಯಾಕೆ। ಇವುಯಾಕೆ ಮಕ್ಕಳಿರಾ ನೀವ್ ಜೋಕೇಲಿಡಿರೆಂದು ನುಡಿದಾನು॥10॥ ಭಕ್ತರು ಬ್ರಾಂಬರು ನಡೆತಂದರು। ಮುತ್ತೈದೇರೆಲ್ಲರೂ ಬಂದರು। ಉತ್ತಮದ ಲಗ್ನ ಎನುವೋರು ಎನುವರು ಗೌರಮ್ಮಾ ನೀ ಬೇಗನೆ। ಚಿತ್ತೈಸೆನ್ನುತ ನುಡಿದಾರು॥11॥ ಅಮರರು ಬ್ರಾಂಬರು ನಡೆತಂದರು। ಕಮಲಾಕ್ಷನ ಸತಿಯರು ಬಂದರು। ಕ್ರಮದಿಂದ ಬ್ರಹ್ಮನರಸಿಯು। ಅರಸೀ ಶಾರದೆ ನಡೆತಂದಳು। ಅರಸರೆ ಕಳುಹೆನುತ ನುಡಿದಳು॥12॥ ನವವಿಧ ಬಣ್ಣದ ಮೇಲ್ಕಟ್ಟು। ನವವಿಧ ಬಣ್ಣದ ತೋರಣವು। ನವವಿಧ ಫಲಗಳಲಿ ಫಲವಸ್ತು। ವಸ್ತುವಿನ ಮಂಟಪದೊಳಗೆ। ಶಿವಶಕ್ತಿ ತಾನು ಕುಳಿತಳು॥13॥

### ಕರೆವೆನು ಶ್ರೀ ಗೌರಿಯ — ರಾಗ: ಶ್ರೀ

ಕರೆವೆನು ಶ್ರೀ ಗೌರಿಯ। ಮರಕದ ಪೀಠಕೆ॥ಪ॥ ಹಿಮ ಶೈಲಬಾಲೆ ನಿನ್ನ। ಪ್ರಮತಿಯರೆಲ್ಲ ಸೇರಿ। ರಮಣಿಯೇ ಬಾರೆಂದು। ಸುಮಶರಹರನಾರಾಣಿ॥1॥ ಪಂಕಜಾಕ್ಷೀರೆಧನುಜೆ। ಬಿಂಕದಾರಿಣಿ। ಕುಂಕುಮಾಂಕಿತಪಾಲ। ಶಂಕರೀಶ್ವರಿ॥2॥ ಬಾಲೇಂದುವದನೆಯೆ। ಶ್ರೀಲಲಿತಾಂಬಿಕೆ। ಫಾಲಲೋಚನನ ಮಡದಿ। ಜಾಲಮಾಳ್ಪುದುತರವೆ॥3॥ ಸುರಮಣಿಯರು ಸಡಗರದಿಂ ಕರೆವರು ಪರಮೇಶ್ವರನ ಮಡದಿ। ಪರಮ ಮಂಗಳೆಯೇ ನಿನ್ನ॥4॥

### ಬಾರೇ ಗೌರಿ ದೇವಿ ಭಜಿಪೆ — ರಾಗ: ನೀಲಾಂಬರಿ

ಬಾರೇ ಗೌರಿ ದೇವಿ ಭಜಿಪೆ ನಾ ನಿನಗೆ। ದೊರೆ ಕಂಕಣ ಕೈಯ್ಯ ಕರದಲಭಯ ಕೊಡು ಎನಗೆ। ಸಾಧು ಸಜ್ಜನರ ಸಂಗತಿಯಕೊಡು ಎನಗೆ। ನಾರಿ ಗೌರಿದೇವಿ ಬಾ ನಮ್ಮ ಮನೆಗೆ॥ಲಾಲಿ॥ ರಾಣಿ ಭದ್ರೆ ಭವಾನಿ। ಕ್ಷುದ್ರಾದಿಗೋಳ್ಗಳ್ ವಂದಿತೆ ನೀಲವೇಣಿ। ಭದ್ರೆ ಹಿಮವತ್‌ಗಿರಿಯ ಶುಕ ಶುಕಾಪಾಣಿ। ಭದ್ರೆಯರಿಗ್ ವರವಿತ್ತು ಬಾಳುವ ಜಾಣೆ॥ಲಾಲಿ॥ ಪಶುಪತಿಯ ಪ್ರಿಯೆ ನೀ ಪಾರ್ವತಿದೇವಿ ತಾಯೆ। ಪಶುರುದ್ರ ಧನದಾನ್ಯ ಪೊಗಳಾಲು ದೇವಿ। ಯಶವ ಕೀರ್ತಿಯ ನಿನ್ನ ಪೊಗಳುವ ಬಾಯಿ। ಹಸನಾಗಿ ವರವಿತ್ತು ಸತತೆನ್ನ ಕಾಯೆ ॥ಲಾಲಿ॥ ವಾರಿಜಾಕ್ಷಿ ಎನ್ನ ಹಗೆತನವ ಬಿಡಿಸೆ। ಧರೆಯೊಳಗೆ ಎನ್ನಲಿ ದಯವನಿರಿಸೆ। ಯಾರಿಗುಸುರಲಿ ಪಡೆವೊ ನಾ ನಿನ್ನ ಮನಸೆ। ನಾರಿ ಗೌರಿದೇವಿ ನಲಿದೆನ್ನ ನಗಿಸೆ॥ಲಾಲಿ॥

### ಹೆಜ್ಜೆಯ ಮೇಲೆ ಹೆಜ್ಜೆಯ ಇಡುತ — ರಾಗ: ವಲಚಿ-ಆದಿತಾಳ

ಹೆಜ್ಜೆಯ ಮೇಲೆ ಹೆಜ್ಜೆಯ ಇಡುತ। ಗೆಜ್ಜೆಯ ನಾದವ ಮಾಡುತ। ಸ್ವರ್ಣಗೌರಿ ಬಾರಮ್ಮ ನಮ್ಮ ಮನೆಗೆ॥ಪ॥ ಭಾದ್ರಪದ ಶುದ್ಧದಾ ತದಿಗೆಯ ದಿವಸ। ನೀನಮ್ಮ ಮನೆಗೆ ದಯಮಾಡಿ ನೀಡು। ಸಂತಸ ತಾಯಂದಿರಿಗೆ ತಾಯೆ ಜಗನ್ಮಾಯೆ। ಈ ಸುತೆಯ ಮೊರೆಯನಾಲಿಸೆ ಸದಾಶಿವಪ್ರಿಯೆ॥1॥ ಸುಗಂಧೋದಕದಿ ನಿನಗೆ ಅಭಿಷೇಕವನು ಮಾಡಿ। ದಿವ್ಯವಾದ ವಸ್ತ್ರಾಭರಣಗಳ ತೊಡಿಸಿ। ಅರಿಶಿನ ಕುಂಕುಮ ಸಿಂಧೂರಗಳಿಂದ। ನಿನ್ನ ಪೂಜಿಸುವೆನಮ್ಮ ಬಂದೆನ್ನ

ಸಲಹಮ್ಮ ॥2॥

### ಪೂಜಿಸಲೆನ್ನಿಂದಲಳವೆ ರಾಗ: ಮಧ್ಯಮಾವತಿ

ಪೂಜಿಸಲೆನ್ನಿಂದಲಳವೆ॥ ಶ್ರೀಗೌರಿ ನಿನ್ನಯ ಚರಣಗಳಾ॥ಪ॥ ನಾನಿನ್ನು ಬಾಲಕಿಯು। ಅರಿಯೆನುನಾನಿನ್ನಯ। ಇರವ ಪಾರ್ವತಿಯೇ ಭಾರತಿಯೇ। ಸಿರಿರಮಣನ ಸೋದರಿಯೆ॥1॥ ಅಪರಾಧಗಳ ಕ್ಷಮಿಸಿ। ಚಪಲವಪರಿಹರಿಸಿ। ಭಕ್ತಿಯನೂ ಶಕ್ತಿಯನೂ। ಮುಕ್ತಿಯನೂ ಕರುಣಿಸುನೀ॥2॥ ಶ್ರೀರಾಮ ವಿಠಲನ್ನಾ। ನಾಮವಜಪಿಸುವಂಥಾ। ಶಂಕರಿ ಸೌಮಾಂಗಲ್ಯ। ಭಾಗ್ಯವನೂ। ನೀಡುವುದೂ॥3॥

### ಪೂಜಿಸಿದಳು ಗೌರಿಯಾ ರಾಗ: ಶ್ರೀ

ಪೂಜಿಸಿದಳು ಗೌರಿಯಾ ಪಾಂಚಾಲೆಯು। ರಾಜರಾಜೇಶ್ವರಿಯ ಭಕ್ತಿಯನು ತಾಳಿ॥ಪ॥ ರಾಜಬಿಂಬ ಸಮಾನ ವದನೆಯು ರಾಜಿತಾಫಲ ರಚಿತ। ಸದನೆಯ ರಾಜ ರಾಜ ಸಮಾನ ವನಿತೆಯ। ಮೂಜಗನ್ಮಾತೆಯ ಸುಗೀತೆಯ ॥1॥ ಚರಣಕ್ಕೆ ಪಾದ್ಯವನ್ನು। ಕರಕಾರ್ಘ್ಯವನ್ನೂ। ಸರಿಸಿಜಾನನೆ ತಾನೂ। ಆಚಮನೀಯವನು। ವಿರಿಚಿಸುತ ಮಧುಪರ್ಕಾದಿ। ಶರ್ಕರದಧಿ ಕ್ಷೀರಾಜ್ಯ ಮಧುವಿಂ। ಎರೆದು ಪಂಚಾಮೃತವ ವಸ್ತ್ರವ ನೆರೆ ಸಮರ್ಪಿಸಿ। ಮುಗುಳು ನಗೆಯಲಿ ॥2॥ ಚಂದನಾಕ್ಷತೆಗಳಿಂದ ಕುಂಕುಮ ಹರಿದ್ರಾ ಸಿಂಧೂರ ವಲಯದಿಂದಾ। ತಾಟಂಕ ಯುಗ್ಮಗಳಿಂದ ಮಂದಾರಾದಿ ಚಂಪಕ ಕುಂದ ಕ್ಯಾದಗಿ ಕಮಲ ಪಾಟಲಿಯಿಂದ ಲಲಿತಾಷ್ಟೋತ್ರ ಶತವ ಅಂದು ಪೇಳುತ। ದಯಾಳು ಹರಿಯ॥3॥ ಧೂಪಾ ದೀಪಾದಿಯಿಂದ ನವಗೋಧುಮ ನೀರಾಂಜನದಿಂದ। ತಾಂಬೂಲವಂ ಶಿವೆಗರ್ಪಿಸಿ ಮಂತ್ರಪುಷ್ಪವ ಚಾಪಳಾಯತ ನೇತ್ರೆ ತನಗನುರೂಪನಾಗಿಹ ವರನ ನೀ ಪಾಲಿಪುದೆಂದು। ಬೇಡುತ ॥4॥

### ದ್ರೌಪದಿ ಮಾಡಿದಳ್ ಗೌರಿ ಪೂಜೆಯನ್ನು ರಾಗ: ಕಾಪಿನಾರಾಯಣಿ

ದ್ರೌಪದಿ ಮಾಡಿದಳ್ ಗೌರಿ ಪೂಜೆಯನ್ನು। ಶ್ರೀಕೃಷ್ಣನು ಸ್ಥಿರಮನಸು ಕೊಡಲೆಂದು॥ಪ॥ ಅರಿಶಿನ ಕುಂಕುಮ ಗಂಧ ಪರಿಮಳ। ಪಾರಿಜಾತ ಪುಷ್ಪ ಕಮಲಪುಷ್ಪದಿಂದ॥ಅ.ಪ॥ ದಾಳಿಂಬೆ ದ್ರಾಕ್ಷಿಯು ನಾರಿಕೇಳ ಫಲವು। ಹಾಲುಸಕ್ಕರೆ ಘೃತ ಧೂಪದೀಪ ನಿವೇದಿಸಿ॥1॥ ನಾರಿ ದ್ರೌಪದಿಯು ನಾರಿಯರ। ಕೂಡಿ ಶ್ರೀ ಅರ್ಜುನನು ಎನಗೆ ಪತಿಯಾಗಲೆಂದು॥2॥

### ಅಂಬನಾ ಪೂಜೆಯ ಸಮಯದಲ್ಲೀ

ಅಂಬನಾ ಪೂಜೆಯ ಸಮಯದಲ್ಲೀ। ಜಗದಂಬನೋಲಗವ ನೋಡುವ ಬನ್ನಿರೆಲ್ಲಾ॥ಪ॥ ಮನವೆಂಬೊ ಮುತ್ತಿನ ಮಂಟಪದ ಮಧ್ಯದಿ। ಅನುವಾದ ಜ್ಯೋತಿ ಪ್ರಜ್ವಲಿಸುತಲಿದೇ। ಅನುಭವರಸವೆಂಬೊ ಅನುಕೂಲವಾಗಿದೆ। ಸನಕವಾದ್ಯದ ಧ್ವನಿ ಕೇಳುತಲಿದೇ॥1॥ ಲೋಕಾನೇಕದ ಜನವೆಲ್ಲ ಕೂಡಿದೆ। ಸಾಕಾರವಾದ ಶ್ರೀಚಕ್ರವಿದೇ। ಲೋಕನಾಯಕಿ ಗಲಂಕಾರ ವಾಗುತಲಿದೆ। ಏಕಾಂತದಾ ಸೇವೆ ಗಣೆಯಾಗಿದೇ ॥2॥ ಕರಣ ಭೇದಗಳು ಉಪಕರಣಗಳು ಸ್ಮರಿಸಿದೆ। ಸ್ಮರಣೆ ದೃಷ್ಟಿಗಳಷ್ಟಗಂಧಗಳಿವೆ। ಕಮಲದಾಪ್ರತಿಗೆ ಶ್ರೇಷ್ಠ ಕಮಲ ಗಾಳರಳಿವೆ। ಕಮಲಾಂಬನಾ ಪೂಜೆಗಣೆಯಾಗಿದೆ॥3॥ ಲೋಕವಾಸನೆಯಳಿದ ಧೂಪಾರತಿಯಿದೆ। ಏಕವಾದ್ಯದ ಏಕಾರತಿಯಿದೇ। ಬೇಕೆಂಬೊ ವಿಷಯದಲಿ ಭಕ್ಷಪಾಯಸವಿದೆ। ಸಹಕಾರವೀದೇಹ ತೆರೆ ಹಾಕಿದೇ ॥4॥ ಮೂಲಮಂತ್ರಗಳೆಂಬ ಸ್ವಾದೋದಕವಿದೆ। ನಾಗವಲ್ಲೀ ತಾಂಬೂಲವಿದೆ। ದೇವಿಗೆ ಪುಷ್ಪಾಂಜಲಿ ಸಮರ್ಪಿಸುತಲಿದೆ। ನಾದದೊಳಗಾಮನ ಓಲೈಸುತಿದೆ॥5॥ ಸತ್ವರಜತಮ ಮೂರು ಗುಣವಿದ್ದಂಥ। ಭಕ್ತಿ ನೀಲಾಂಜನ ಬೆಳಗುತಲಿದೆ। ತತ್ವದದ ಸಂಪದದ ಛತ್ರಿ ಚಾರಮವಿದೆ।

ಉತ್ತತ್ತಿ ದಶಫಲವು ದರ್ಪಣವಿದೆ।।6।। ನಿಶ್ಚಯ ಮನಸ್ಸಿನ ಮುತ್ತಿನಾರತಿಯಿದೆ। ತತ್ವ ನಿಜದಾಕಳೆ ತೋರುತಲಿದೆ। ಮುಕ್ತಿ ಮಾರ್ಗಕೆ ಮನ ಮುಂದಾಗಿ ನಿಂತಿದೆ। ಭಕ್ತರಿಗೆ ಮನದಿಷ್ಟ ವಾಗುತಲಿದೇ ।।7।।

## ಬರುತಾನೆ ಹರ ಬರುತಾನೆ

ಬರುತಾನೆ ಹರ ಬರುತಾನೆ।।ಪ।। ಬರುತಾನೆ ಹರ ಬರುತಾನೆ ಶಿವ। ಪರಿ ಪರಿ ಬಳೆಗಳ ತುರತಾನೆ।।ಅ.ಪ.।। ಹಸಿರು ಕನ್ನಡಿ ಬಳೆಕುಸುರಿಮಾಟದ ಬಳೆ। ಶಶಿಮುಖಿ ಪಾರ್ವತಿಗೆ। ತೊಡಿಸಬೇಕೆನುತಾ।।1।। ನೀಲ ಕನ್ನಡಿ ಬಳೆ ಸಾಧು ಮಾಟದ ಬಳೆ। ಭಾಮೆ ಪಾರ್ವತಿಗೆ। ತೊಡಿಸಬೇಕೆನುತಾ।।2।। ಕೆಂಪು ಕನ್ನಡಿ ಬಳೆ। ವಂಕಿಮಾಟದ ಬಳೆ। ಕೆಂಚ ಪಾರ್ವತಿಗೆ। ತೊಡಿಸಬೇಕೆನುತಾ।।3।।

## ಏಳಿರೆ ಸತಿಯರೆಲ್ಲ (ಗೌರಿ ಬಳೆ ಇಟ್ಟ ಹಾಡು)

ಏಳಿರೆ ಸತಿಯರೆಲ್ಲ ತಡವೇಕೆ ನೀಡಿರೆ ನಳಿತೋಳನು ನಾರಿ ಗೌರಮ್ಮನ ನಳಿ ತೋಳಿಗೆ ತಕ್ಕ ನಾಲದ ಬಳೆ ಎಂದಾನು।।ಪ।। ಹಸಿರು ಹೊನ್ನ ಬಳೆಯು ಹೊನ್ನು ಜೇನು ತೂಕದ ಬಳೆಯು ಅರಸಿ ಗೌರಮ್ಮನ ನಳಿತೋಳಿಗೆ ತಕ್ಕ ಹಸುರಿನ ಬಳೆ ಎಂದಾನು।।1।। ಹೊನ್ನು ಹೊಂಗಿನ ಬಳೆಯು ಹೊಸ ಹೊನ್ನ ಜೇನ ತೂಕದ ಬಳೆಯು ಅರಸು ಗೌರಮ್ಮನ ನಳಿ ತೋಳಿಗೆ ಇಟ್ಟ ತನ್ನ ಮನದಿ ನಕ್ಕನೇ।।2।। ನ್ಯಾಯವೇತಕೋ ನಿನಗೆ ಎನ ಕೈಗೆ ಬಳೆ ಇಡ ಬಂದವಗೆ ತೆರಳು ಹೋಗಯ್ಯ ಎಂದೆನುತಲೆ ಪಾರ್ವತಿ ಕರೆದು ವೀಳ್ಯವ ಕೊಟ್ಟಳು।।3।। ಬರಿಯ ವೀಳ್ಯವ ಕೊಟ್ಟರೆ ಹೋಗುವ ಬಳೆಗಾರ ನಾನಲ್ಲವೇ ಕೈಲಾಸದಿಂದ ಬಂದೇನು ಎನುತಲೆ ಉಡುಗೊರೆ ಕೊಡಿಸೆಂದಾನು।।4।। ಎಂದಾ ಮಾತನು ಕೇಳುತ ಪಾರ್ವತಿ ತನ್ನ ಮನದಿ ಗ್ರಹಿಸಿ ಪ್ರಾಣದೊಲ್ಲಭ ಮುಕ್ಕಣ್ಣ ಶಿವನೆಂದು ಪಾರ್ವತಿ ಎರಗಿದಳು।।5।।

## ಅಂಬೆ ಪಾಲಿಸೆ — ರಾಗ: ಆನಂದಭೈರವಿ

ಅಂಬೆ ಪಾಲಿಸೆ ಅಂಬೆ ಪಾಲಿಸೆ ಅಂಬೆ ಪಾಲಿಸೆ। ತಾಮ್ರ ಗೌರಿ ಬೆಂಬಿಡದೆ ಎನ್ನ ರಕ್ಷಿಸೆ।।ಪ।। ಎಷ್ಟು ದೂರದಿಂದ ಬಂದೆನೇ। ಅಂಬ ನಿಮ್ಮ ಕೀರ್ತಿಯನ್ನು ಕೇಳಿ ನಿಂದೆನೆ। ಅಂಬ ನಿನ್ನ ಮೂರ್ತಿಯನ್ನು ತೋರಿಸಮ್ಮ ಮುಕ್ತಿ ಪಥವ ಪಾಲಿಸಮ್ಮ ಕರ್ತೃಶಂಕರಾನ ರಾಣಿ ಕಾಂತೆಯೆನ್ನ ರಕ್ಷಿಸಮ್ಮ ।।1।। ಹಸ್ತ ಕಡಗ ಹೊನ್ನ ಕಂಕಣವೊಪ್ಪುತಿರುವ ಮುತ್ತಿನ ವಂಕಿ ತೋಳಬಾವುಲಿ। ಮುತ್ತಿನೋಲೆ ಹೊನ್ನ ಹೂವು, ಮೂಗುತಿಯು ಥಳಥಳಿಸೆ। ಕರ್ತೃ ಶಂಕರಾನಾ ರಾಣಿ ಕಾಂತೆ ಎನ್ನ ರಕ್ಷಿಸಮ್ಮ।।2।। ಚರಣದಂದಿಗೆ ಬೆರಳ ಮುದ್ರಿಕೆ। ಘಲೀರ್ ಎಂದು ಬರುವ ಭರವ ಎನಗೆ ತೋರಿಸೆ। ನಡುವಿನೊಳೊಡ್ಯಾಣ ಹೊಳೆಯೆ, ನೆರಿಗೆ ಪೀತಾಂಬ್ರ ಅಲುಗೆ ಧೃಢದಿ ಭಕ್ತರನ್ನು ಪೊರೆವ ಪಾವನೆ ಮೋಹನೆ।।3।। ದೇಶಕಧಿಕವೆಂದು ಮೆರೆಯುವ ಗೋಕರ್ಣ ಪುರದಿ ನೆಲೆಸಿಹ। ಕಾಶಿಗಿಂತ ಅಧಿಕವೆಂದು ತ್ರಾಸಿನಲ್ಲಿ ತೂಗುತಿರಲು ಈಶ ನಾರಾಯಣಿಯೆ ಸಂತೋಷದಿಂದ ಸಲಹೆ ಬಂದು।।4।। ಭಕ್ತ ವತ್ಸಲೆ ಭಾಗ್ಯದಾಯಿನಿ। ಮುಕ್ತಿಮಾರ್ಗವನ್ನು ತೋರಿಸೆ। ಕರ್ತೃ ತಿರುಪತಿಯ ವಾಸ ವೆಂಕಟೇಶನೇ। ಸಲಹುಎನ್ನ ಸತ್ಯಗುರು ನಾರಾಯಣಿಯೆ ಕಾಂತೆ ಎನ್ನ ಸಲಹಮ್ಮ।।5।।

## ಭದ್ರಾಣಿ ದೇಹಿ ಗೌರಿ — ರಾಗ: ಹಿಂದೋಳ

ಭದ್ರಾಣಿ ದೇಹಿ ಗೌರಿ ರುದ್ರಾಣಿ ಭೂರ್ಯಾಭರಣೆ।।ಪ।। ಗರ್ವಾದಿ ನಿರ್ಮಿತಾನಿ ದುರ್ವಾಸ ದುಃಖದಾನಿ ಸರ್ವಾಣಿ ಪಾತಕಾನಿ ಶರ್ವಾಣಿ ಬಿಂದುತಾನಿ।।1।। ಅಂಬುಜನಾಭಸಹಿತೆ ಅಂಭೋರುಹ ಶಂಭುದಯಿತೆ ಗಾಂಭೀರ್ಯ ಸುಗುಣಾಭರಿತೆ ಕುಂಭೋದ್ಭವಾದಿ ವಿನುತೆ।।2।। ಇಂದೀವರಾಕ್ಷನಯನೆ ನಂದೀಶವಾಹನಸತಿ ಕುಂದಕುಟ್ಮಲರದನೆ ಚಂದ್ರಸಹಸ್ರವದನೆ।।3।।

## ಕಾರುಣ್ಯ ನಿಲಯೆ ಗೌರಿ — ರಾಗ: ಕಾಂಬೋಧಿ

ಕಾರುಣ್ಯ ನಿಲಯೆ ಗೌರಿ। ಪರಮೇಶ್ವರಿ ಕಾರುಣ್ಯ ನಿಲಯೇ ಗೌರಿ॥ಪ॥ ಘೋರದುರಿತ ವಿದೂರೆ ಜಗದೋದ್ಧಾರೆ। ನಿಗಮ ವಿದಾರೆ ಶಂಕರೆ ಧಾರೆ। ಸದ್ಗುಣ ಹಾರೆ ದೈತ್ಯ ವಿದಾರೆ। ಭಕ್ತೋದ್ಧಾರೆ ಸಂತತ॥1॥ ಶ್ರೀಮಹಾಬಲಧಾಮ ಸುಜನ ಸ್ತೋಮ। ವಂದಿತೆ ಕೋಮಲಾಂಗಿಯೇ। ಸೋಮಧರ ಸಖಿ, ಸೋಮ ಸನ್ಮುಖಿ। ಕಾಮಿತಾರ್ಥಪ್ರದೆ। ತಾಮರಸಪದೆ॥2॥ ಭೂರಿ ಘನ ಕರುಣಾರಸಪ್ರಿಯೆ। ಸಾರ ಹೃದಯ ಸರೋರುಹೇಕ್ಷಣೆ। ಧೀರೆ ಪರಮೋದ್ಧಾರೆ ಸುಜನ ಗಂಭೀರೆ। ಗುರು ಜಯ ವಿಠಲ ಸೋದರಿ॥3॥

### ಜಯ ಜಯ ಶ್ರೀ ವರ ಗೌರಿ — ರಾಗ: ಜುಂಜೋಟಿ

ಜಯ ಜಯ ಶ್ರೀ ವರ ಗೌರಿ। ಜಯ ಶ್ರೀ ಶಂಕರೀ॥ಪ॥ ಜಯ ಪರಮೇಶ್ವರಿ ಜಯಜಯ॥ ಅಂಬ ಭವಾನಿಯೆ॥ಅ.ಪ॥ ನಂಬಿಹೇ ದೇವಿಯೇ। ಬೆಂಬಿಡದೇ ಕಾಯೇ। ಶಂಭು ಸಹಿತಾ ಮಾಯೇ॥1॥ ಬಾಲರ ಮಾತೆಯೇ ಪಾಲಿಸುವಂದಿತೇ। ಬಾಲೇರ ಪಾಲಿಸು ಕಾಳಿ ಮಹಾದೇವಿ॥2॥ ನೇಮದೀ ವಂದಿಪೆ। ರಾಮ ಶ್ರೀ ಚಂಪಕ। ಧಾಮನಸೋದರಿ। ಪ್ರೇಮದಿ ಸಲಹೆನ್ನಾ॥3॥

### ವರಗೌರಿ ಪಾಲಿಸು ಧರೆಯೊಳು — ರಾಗ: ಶಂಕರಾಭರಣ

ವರಗೌರಿ ಪಾಲಿಸು ಧರೆಯೊಳು ಎಮ್ಮನು॥ಪ॥ ಸಾರಿ ಬೇಡಿಕೊಂಡೆವೀಗ। ಭರದೊಳು ನಿನ್ನ॥ಅ.ಪ॥ ದುಷ್ಟನಾಶನೀ ಸೃಷ್ಟಿಪೋಷಣೇ ಶ್ರೇಷ್ಠಳೆ ನಮ್ಮಿಷ್ಟವನು ಸೃಷ್ಟಿಯೋಳ್ ನಡೆಸು॥1॥ ದಾನವಾಂತಕಳೇ ದೀನ ಪೋಷಕಳೇ ಕ್ಷೋಣಿಯೊಲ್ ಕೃಷ್ಣೇಂದ್ರನನ್ನು ಸಲಹು ಮಾತೆಯೇ॥2॥ ಧರೆಯೊಳು ಕಲ್ಯಾಣ ಪುರಿಯೊಳು ವಾಸಿಪ ವರದರಾಜನನ್ನು ನೀಪೊರೆ ಬೇಗ ಸಾರಸನೇತ್ರೆ॥3॥

### ಸ್ವರ್ಣಗೌರಿ ಶ್ರೀಗೌರಿ — ರಾಗ: ಷಣ್ಮುಖಪ್ರಿಯ-ಆದಿತಾಳ

ಸ್ವರ್ಣಗೌರಿ ಶ್ರೀಗೌರಿ, ಗಜಗೌರಿ ದೇವಿಯೆ। ಕೈಲಾಸ ಪುರವಾಸಿ, ಪರಮೇಶ್ವರಿಯೆ॥ಪ॥ ಮಂಗಳಾಂಗಿಯರೆಲ್ಲ ಮಿಂದು ಪೀತಾಂಬರವುಟ್ಟು। ಮಂಟಪದಿ ಗೌರಿಯ ನಿಟ್ಟು ಅಲಂಕರಿಸಿ ಪೂಜಿಸಿ। ಹೋಳಿಗೆ, ಆಂಬೋಡೆ, ಶಾವಿಗೆಪಾಯಸ। ವಿಧವಿಧ ಭಕ್ಷ್ಯಗಳ ನೈವೇದ್ಯ ನಿನಗೆ॥1॥ ಹದಿನಾರು ದೀಪಗಳ ಹಚ್ಚಿ ಗೌರಿಯ ಕಥೆಕೇಳಿ। ಮಂಗಳ ದ್ರವ್ಯಗಳಿಂದ ಬಾಗಿನ ಕೊಡುತಲಿ। ಕೈಗೆ ದಾರಿಕಟ್ಟುತ ಆರತಿ ಮಾಡುತ। ಕುಕ್ಕೆಸ್ವಾಮಿ ಮಾತೆಯನು ವರವ ಬೇಡುವರು॥2॥

### ಮಂಗಳಗೌರಿ ಬಾಗಿನ ನೀಡುವೆ — ರಾಗ: ತಿಲಂಗ್

ಮಂಗಳಗೌರಿ ಬಾಗಿನ ನೀಡುವೆ। ಸ್ವೀಕರಿಸು ತಾಯೇ ಸ್ವೀಕರಿಸು॥ಪ॥ ಚಿನ್ನದ ಮೊರದೊಳು ಬಾಳೆಲೆ ಹಾಸಿ। ಅರಿಶಿನ ಕುಂಕುಮ ಸಿಂಧೂರವನಿರಿಸಿ। ವಿಧವಿಧ ವಸ್ತ್ರಾಭರಣವ ತಾನಿರಿಸಿ। ಪರಮೇಶ್ವರಿ ನಿನಗೆ ಪ್ರೇಮದಿ ನೀಡುವೆ॥1॥ ಚಿಗುರೆಲೆಯೊಳ್ ಅಡಿಕೆ ಪೂರ್ಣಫಲವಿರಿಸಿ। ಚತುರ್ವಿದ ಧಾನ್ಯ ದವಸವನಣಿಮಾಡಿ। ಮಾಗಿದ ಹಣ್ಣು ಹಂಪಲವನಿರಿಸಿ। ನಿಷ್ಕಲ್ಮಶದಿಂದ ನೀಡುವೆ ಗೌರಿ॥2॥ ಬಾಗಿನ ಸ್ವೀಕರಿಸಿ ಹರಸು ನೀ ತಾಯೆ। ವಿನಯದಿಂದ ಬೇಡುವೆ ಗೌರಿ ಮಾಯೆ। ಶಾರದದಾಸಿ ವಂದಿತೆ ಮಹಾತಾಯೆ। ಭಕ್ತಿ ಸೌಭಾಗ್ಯವಿತ್ತು ಪೊರೆಯೆ ತಾಯೆ॥3॥

### ನಮ್ಮೋರು ಬಡವರಿನ್ನೇನೀಹರು (ಶಿವ-ಪಾರ್ವತಿಯರಸಂವಾದ)

"ನಮ್ಮೋರು ಬಡವರಿನ್ನೇನೀಹರು?"। ನಾಗಭೂಷಣ ತಾನು ನಗುತ ಗೌರೀನ್ ಕಂಡು। ಹೋಗಿ ಬಂದ್ಯಾ ತೌರುಮನೆಗೆ ನೀನು। ಈಗೇನು ಕೊಟ್ಟರು ಇನ್ನೇನು ಕೊಡುವರು। ಬೇಗದಿಂದಲಿ ಹೇಳು ಎಂದು ಹರನು॥1॥ ಅಂದ ಮಾತಿಗೆ ಗೌರಿ

ಬಂದು ಮಾತಾಡಿದಳೆ। ಬಂಧುಬಳಗಗಳೆಲ್ಲ ಸುಖದಲಿಹರು। ತಂದೆ ಗಿರಿರಾಯನು ಬಹಳ ಬಡವನು ಮುದುಕ। ಈಗೇನು ಕೊಟ್ಟಾನು ನಮಗೆಂದಳು।।2।। ಅಲ್ಪಸ್ವಲ್ಪವೆಂದು ಕೊಪ್ಪರಿಗೆ ಧನವಿತ್ತ। ಎಪ್ಪತ್ತು ಆನೆ ಕುದುರೆಗಳ ಇತ್ತ। ಒಪ್ಪದಲಿ ಬಳಸೆಂದು ಹೊನ್ನಕಳಶವನಿತ್ತ। ನಮ್ಮೋರು ಬಡವರಿನ್ನೇನೀಹರು।।3।। ಕರೆವ ಹಸು ಹನ್ನೆರಡು। ಕಾಲಾಳುನೂರುಜನ। ಕರೆವ ಎಮ್ಮೆ ಎಂಟು ಅದರ ಕರುವೆಂಟು। ಹಾಲಕರೆದು ಕಾಸಿಕೊಡುವ ದಾದಿಯರ ನಿತ್ತರು। ನಮ್ಮೋರು ಬಡವ...।।4।। ನಾಲ್ಕು ಹರಿವಾಣಗಳು ನಾಲ್ಕುದೀವಿಗೆ ಕಂಬ। ನಾಲ್ಕು ತಪ್ಪೇಲಿ ಹದಿನೆಂಟು ಕಂಚು। ನಾಲ್ಕು ಬಿಂದಿಗೆಗಳು ನಾಲ್ಕು ಚೆಂಬಿತ್ತರು। ನಮ್ಮೋರು...।।5।। ಐದ್ಹೇರು ಸಣ್ಣಕ್ಕಿ ಐದ್ಹೇರು ದಪ್ಪಕ್ಕಿ। ಐದ್ಹೇರು ಅಡಿಕೆ ಒಂದ್ಹೇರು ಬೆಲ್ಲ। ಐದು ಕೊಳಗದ ಮೆಣಸು ಸಂದೂಕವಿತ್ತರಾ। ನಮ್ಮೋರು...।।6।। ಐದು ಪಟ್ಟೇ ಸೀರೆ ಐದು ಬಣ್ಣದ ಸೀರೆ। ಐದು ಶಕಲಾತಿ ಹದಿನೈದು ಶಾಲು।ಐದು ರತ್ನಗಂಬಳಿ ಹಚ್ಚಡಗಳಿತ್ತರು। ನಮ್ಮೋರು ಬಡವ...।।7।। ಕಡಗ ಚೇಪರಿಶಿನ ಕಸ್ತೂರಿ ಕುಂಕುಮ। ತೊಡುವ ಕುಪ್ಪಸಗಳ ನಡುವೆ ಗಿಳಿಯು। ಕರೆದು ಮುತ್ತೈದೇರು ಮಡಿಲಕ್ಕಿ ತುಂಬಿದರು। ನಮ್ಮೋರು ಬಡವ...।।8।। ಇಷ್ಟದಾ ಮಗಳೆಂದು ಅಷ್ಟೂನಿನಗಿತ್ತರು। ಒಂದಿಷ್ಟಾದರೂ ಎನಗೆ ಕೊಡಲಿಲ್ಲವೆಂದ। ಅಷ್ಟು ಎನಗಿತ್ತರು ಎನ್ನ ನಿಮಗಿತ್ತರು। ನಮ್ಮೋರು ಬಡವ ರಿನ್ನೇನೀಹರು।।9।। ಜಯಮಂಗಳಂ ನಿತ್ಯ ಶುಭಮಂಗಳಂ।।

### ಕನಕ ಮಂಜುಳಯುಕ್ತ (ನಿತ್ಯ ಗೌರೀಸ್ತುತಿ) ರಾಗ: ಆನಂದಭೈರವಿ

ಕನಕ ಮಂಜುಳಯುಕ್ತ ಕಾಮಿತಾರ್ಥ ಪ್ರಿಯೇ। ಕನಕ ಮಂಜುಳಿಯೇ ಮಹನಿತ್ಯ ಗೌರಿ। ಮನಸು ನಿನ್ನಲಿ ನೆಲೆಸಿ ಮಾನಸ ಪೂಜೆಮಾಡುವೆ। ಮಾಂಗಲ್ಯತನವ ಕೊಡು ಮಹನಿತ್ಯ ಗೌರಿ। ಅರಿಶಿನ ಕುಂಕುಮ ಅಭಯ ಹಸ್ತದಿ ಕೊಡು। ಪತಿಗೆ ದೀರ್ಘಾಯುಷ್ಯವ ಪಾಲಿಸೈ। ಕರಿಮಣಿ ಬಿಚ್ಚೋಲೆ ಕಮಲ ಹಸ್ತದಿ ಕೊಡು। ಕರಿಮಣಿಯ ಪಾಲಿಸೈ ಕಮಲಾಕ್ಷಿಯೇ। ನಿನ್ನ ನಂಬಿ ಪೂಜಿಸಿದವರಿಗೆ ಇನ್ನೇನೂ ಭಯವಿಲ್ಲ। ನಿನ್ನ ಲೋಕವ ನೆರೆದ ಮನುಜರಿಲ್ಲಾ। ಅನ್ನಪೂರ್ಣೆ ನೀನು ಆದಿ ಪಂಚಾಕ್ಷರಿ। ಪನ್ನಗೇಶ್ವರನ ಪ್ರೀತಿ ಪರಮೇಶ್ವರಿ ಜಯ ಜಯತು ಸಕಲ ಗುಣ ಸಂಪನ್ನೇ । ಜಯ ಜಯತು ಮೂರು ಲೋಕಕೆ ವರಗಳ ಕೊಡುವ್ಹೋಳೇ। ಜಯ ಜಯತು ಗಂಗೆ ಗೌರಮ್ಮಗೇ। ಮಂತ್ರ ಪುಷ್ಪಗಳಿನ್ನಿಟ್ಟು ಮಡದಿ ಗೌರಮ್ಮನಿಗೆ। ನಿಂತು ಹದಿನಾರು ಪ್ರದಕ್ಷಿಣೆಯ ಮಾಡಿದರೆ। ಸಂತತಾ ಸೌಭಾಗ್ಯ ಕೊಟ್ಟು ರಕ್ಷಿಪಳು। ಜಯ ಮಂಗಳಂ ನಿತ್ಯ ಶುಭಮಂಗಳಂ।। ಜಯತು ಭವಾನಿಗೆ। ಜಯತು ಕಲ್ಯಾಣಿಗೆ।।

### ಪಾಹಿ ಶಿವೆ ಪಾಹಿ ಶಿವೆ ಪರಮ ಕಲ್ಯಾಣಿ ರಾಗ: ಶಿವರಂಜನಿ

ಪಾಹಿ ಶಿವೆ ಪಾಹಿ ಶಿವೆ ಪರಮ ಕಲ್ಯಾಣಿ ಪಾಲಿಸೆಮ್ಮ ಪಾಪನೀಗಿ ಮಹಿಷಮರ್ದಿನಿ।।ಪ।। ನಿನ್ನ ಕರುಣೆ ಭಿಕ್ಷೆಯದೆ ಶಿವನ ಬೇಡಿಕೆ। ಅಣುಸಮಾನ ನರರ ನೀನು ಕಾಯೆಅಂಬಿಕೆ। ಮಾತೆ ಚರಣ ಕಮಲದಲ್ಲಿರಿಸಿನಂಬಿಕೆ। ಮನುಜಕುಲವೆ ತ್ರಾಹಿ ಎನಲು ನೀಡು ಕೋರಿಕೆ।।1।। ರೌದ್ರರೂಪ ತಾಳಿದಂಥ ಸಿಂಹವಾಹಿನಿ। ಚಂಡಮುಂಡ ರಕ್ತಬೀಜ ಧನುಜ ಧ್ವಂಸಿನಿ। ಮರುಕಧಾರೆ ಎರೆಯೆಮಾತೆ ಮಾರ್ಗದರ್ಶಿನಿ। ಶರಣು ಬಂದ ಜನಕೆ ನೀನು ಭಾಗ್ಯದಾಯಿನಿ।।2।।

### ಜಯ ಗಿರೀ ತನಯೆ ದಕ್ಷಜೆ (ಪಾರ್ವತೀ ಚಾಲೀಸಾ)

ಜಯ ಗಿರೀ ತನಯೆ ದಕ್ಷಜೆ ಶಂಭು ಪ್ರಿಯೆ ಗುಣಖನಿ। ಗಣಪತಿ ಜನನೀ ಪಾರ್ವತೀ ಅಂಬೆ ಶಕ್ತಿ। ಭವಾನಿ।। ಬ್ರಹ್ಮಾ ಭೇದ ನ ತುಮ್ಹಾರೋ ಪಾವೇ। ಪಂಚ ಬದನ ನಿತ ತುಮಕೊ ಧ್ಯಾವೇ।। ಷಣ್ಮುಖ ಕಹಿ ನ ಸಕತ ಯಶ್ ತೇರೋ। ಸಹಸ ಬದನ ಶ್ರಮ ಕರತ ಘನೇರೋ।। ತೇವ್ಹೂ ಪಾರ ನ ಪಾವತ ಮಾತಾ। ಸ್ಥಿತ ರಕ್ಷಾಲಯ ಹಿತ ಸಜಾತಾ।। ಅಧರ ಪ್ರವಾಲ ಸದೃಶ ಅರುಣಾರೆ। ಅತಿ ಕಮನೀಯ ನಯನ ಕಜರಾರೆ।। ಲಲಿತ ಲಲಾಟ ವಿಲೋಪತ ಕೇಶರ। ಕುಂಕುಮ ಅಕ್ಷತ ಶೋಭಾ ಮನಹರ।। ಕನಕ ಬಸನ ಕಂಚುಕೀ ಸಜಾಯೇ। ಕಟಿ ಮೇಖಲಾ ದಿವ್ಯ ಲಹರಾಯೇ।। ಕಂಠ ಮದಾರ ಹಾರ ಕೀ ಶೋಭಾ। ಜಾಹಿ ದೇಖಿಂ ಸಹಜಹಿ ಮನ ಲೋಭಾ।। ಬಾಲಾರುಣ ಅನಂತ ಛಬಿ ಧಾರಿ। ಆಭೂಷಣ ಕೀ ಶೋಭಾ ಪ್ಯಾರಿ।। ನಾನಾ ರತ್ನ ಜಡಿತ ಸಿಂಹಾಸನ। ತಾಪರ ರಾಜತಿ ಹರಿ ಚತುರಾನನ।। ಇಂದ್ರಾದಿಕ ಪರಿವಾರ ಪೂಜಿತ।

ಸ್ವರ್ಣಮಕುಟ ಸಿರಿ ನಯನ ವಿಶಾಲಾ। ರಾಜತ ಉರ ಮುಕ್ತಾಮಣಿ ಮಾಲಾ।। ಸುಂದರ ಪೀತಾಂಬರ ತನ ಸಾಜತ। ಚರಣ ಪಾದುಕಾ ಮುನಿ ಮನ ರಾಜತ।। ಋದ್ಧಿ ಸಿದ್ಧಿ ತಬ ಚಂವರ ಢುರಾವೈ। ಇಂದ್ರಾಧಿಕ ಸುರಜಯ ಜಯ ಗಾವೈಂ।। ತುಮ ಶಿವ-ಸುಮನ ಷಡಾನನ ಭ್ರಾತಾ। ಮಾತು ಪಾರ್ವತಿ ಜಗ ವಿಖ್ಯಾತಾ। ತುಮ್ಹಾರೋ ನಾಮ ಜಪೈ ಜೋ ಕೋಯೀಂ ತಾಕೀ ಪೂರ್ಣ ಕಾಮನಾ ಹೋಯೀಂ ಜಯ ವಿದ್ಯಾ ಲಬ ಬುದ್ಧಿ ವಿಧಾಯಕ। ಜಯ ಗಣೇಶ ಗಣಪತಿ ನಾಯಕ।। ಕೃಪಾ ದಾಸ ಪರ ಸದಾಹಿ ಕೀ ಜೈ।। ಸಂಕಟ ಮೆಟಿ ಶರಣ ಮಂಹ ಲೀಜೈ।।
1-ದೋಹಾ:- ಶ್ರದ್ಧಾ ಭಕ್ತಿ ಸಮೇತ ಜೋ ಕರ್ರೈ ಮುದಿತ ಹೈ ಧ್ಯಾನ। ಶ್ರೀಗಣೇಶ ಕೀ ಕೃಪಾಸೇ ಪಾವೈ ಪದ್ ನಿರ್ವಾಣ।।

**ಜಯ ಗಣಪತಿ ಸದ್ಗುಣ (ಗಣಪತಿ ಚಾಲೀಸಾ-ಕನ್ನಡ) ರಾಗ: ಮೋಹನ-ಏಕತಾಳ**

ಜಯ ಗಣಪತಿ ಸದ್ಗುಣ ಸದನ। ಕರಿವರ ವದನ ಕೃಪಾಲ। ವಿಘ್ನ ಹರಣ ಮಂಗಲ ಕರಣ। ಜಯ ಜಯ ಗಿರಿಜಾ ಲಾಲ್।।1।। ಜಯ ಜಯ ಜಯ ಗಣಪತಿ ಗಣರಾಜು। ಮಂಗಲ ಭರಣ ಕರಣ ಶುಭಕಾಜು।। ಜಯ ಗಜವದನ ಸದನ ಸುಖದಾತಾ। ವಿಶ್ವವಿನಾಯಕ ಬುದ್ಧಿ ವಿಧಾತ।।2।। ವಕ್ರತುಂಡ ಶುಚಿ ಶುಂಡ ಸುಹಾವನ। ತಿಲಕ ತ್ರಿಪುಂಡ ಬಾಲ ಮನ ಭಾವನ।। ರಾಜತ ಮಣಿಮುಕ್ತನ ಉರಮಾಲಾ। ಸ್ವರ್ಣ ಮಕುಟ ಶಿರ್ ನಯನ ವಿಶಾಲ।।3।। ಪುಸ್ತಕ ಪಾಣಿ ಕುಠಾರ ತ್ರಿಶೂಲಂ। ಮೋದಕ ಭೋಗ ಸುಗಂಧಿತ ಫೂಲಂ।। ಸುಂದರ ಪೀತಾಂಬರ ತನ್ ಸಾಜಿತ। ಚರಣ ಪಾದುಕಾ ಮುನಿ ಮನ ರಾಜಿತ।।4।। ಧನಿ ಶಿವ ಸುವನ ಷಡಾನನ ಭ್ರಾತಾ। ಗೌರೀ ಲಲನ ವಿಶ್ವವಿಖ್ಯಾತಾ।। ರುದ್ಧಿ ಸಿದ್ಧಿ ತವ ಚಂವರ ಸುಧಾರೆ। ಮೂಷಕ ವಾಹನ ಸೋಹತ ದ್ವಾರೆ।।5।। ಕಹೋ ಜನ್ಮ ಶುಭ ಕಥಾ ತುಮ್ಹಾರೀ। ಅತಿ ಶುಚಿ ಪಾವನ್ ಮಂಗಲಕಾರಿ।। ಏಕ ಸಮಯ ಗಿರಿರಾಜ ಕುಮಾರಿ। ಪುತ್ರ ಹೇತು ತಪ ಕೀನ್ಹೋ ಭಾರಿ।।6।। ಭಯೋ ಯಜ್ಞ ಜಬ ಪೂರ್ಣ ಅನೂಪಾ। ತಬ್ ಪಹೂಂಚ್ಯೋ ತುಮ್ ಧರಿ ದ್ವಿಜ ರೂಪಾ।। ಅತಿಥಿ ಜಾನಿ ಕೇ ಗೌರಿ ಸುಖಾರಿ। ಬಹುವಿಧ ಸೇವಾ ಕರೀ ತುಮ್ಹಾರೀ।।7।। ಅತಿ ಪ್ರಸನ್ನ ಹೈ ತುಮ ವರ ದೀನ್ಹಾ। ಮಾತು ಪುತ್ರ ಹಿತ ಜೋ ತಪ ಕೀನ್ಹಾ।। ಮಿಲಹಿಂ ಪುತ್ರ ತುಹಿ, ಬುದ್ಧಿ ವಿಶಾಲಾ। ಬಿನಾ ಗರ್ಭ ಧಾರಣ ಯಹಿ ಕಾಲಾ।।8।। ಗಣನಾಯಕ ಗುಣ ಜ್ಞಾನ ನಿಧಾನ। ಪೂಜಿತ ಪ್ರಥಮ ರೂಪ್ ಭಗವಾನಾ।। ಅಸಕೇಹಿ ಅಂತರ್ಧಾನ್ ರೂಪ್ ಹೈ। ಪಲನಾ ಪರ್ ಬಾಲಕ ಸ್ವರೂಪ್ ಹೈ।।9।। ಬನಿ ಶಿಶುರೂದನ್ ಜಬಹಿಂ ತುಮ ಠಾನಾ। ಲಖಿಮುಖ ಸಖ ನಹಿಂ ಗೌರಿ ಸಮಾನಾ।।ಸಕಲಮಗನ ಸಖ ಮಂಗಲ ಗಾವಹಿಂ। ನಭತೇ ಸುರನ್ ಸುಮನ್ ವರ್ಷಾವಹಿಂ।।10।। ಶಂಭುಉಮಾ ಬಹುದಾನ್ ಲುಟಾವಹಿಂ। ಸುರಮುನಿಜನ ಸುತ ದೇಖನ ಆವಹಿಂ।। ಲಖಿ ಅತಿ ಆನಂದ ಮಂಗಲ ಸಾಜಾ। ದೇಖನ ಭೀ ಆಯೆ ಶನಿ ರಾಜಾ।।11।। ನಿಜ ಅವಗುಣ ಗನಿಶನಿ ಮನ ಮಾಹೀಂ। ಬಾಲಕ ದೇಖನ ಚಾಹತ ನಹೀಂ।। ಗಿರಿಜಾ ಕಛುಮನ ಭೇದ ಬಢಾಯೋ। ಉತ್ಸವ್ ಮೋರ್ ನ ಶನಿ ತುಹಿ ಭಾಯೋ।।12।। ಕಹನ ಲಗೆ ಶನಿ ಮನ ಸಕುಚಾಯೀ। ಕಾ ಕರಿಹೋಂ ಶಿಶು ಮೋಹಿ ದಿಖಾಯೀ।। ನಹಿಂ ವಿಶ್ವಾಸ ಉಮಾ ಉರ್ ಭಯವೂ। ಶನಿ ಸೋಂ ಬಾಲಕ ದೇಖನ ಕಹಾವೂ।।13।। ಪಢತಹೀಂ ಶನಿ ದ್ರುಗಕೋಣ ಪ್ರಕಾಶಾ। ಬಾಲಕ ಸಿರ್ ಉಡಿ ಗಯೋ ಆಕಾಶಾ। ಗಿರಿಜಾ ಗಿರೀ ವಿಕಲ ಹೈ ಧರಿಣೀ। ಸೋ ದುಃಖ ದಶಾ ಗಯೋ ನಹಿಂ ವರಣಿ।।14।। ಹಾಹಾಕಾರ್ ಮುಚ್ಯೋ ಕೈಲಾಶಾ। ಶನಿಕೀನ್ಹೋ ಲಖಿ ಸುತ ಕಾ ನಾಶಾ।। ತುರತ ಗರುಡ ಚಢಿವಿಷ್ಣು ಸಿಧಾಯೆ। ಕಾಟಿ ಚಕ್ರ ಸೋ ಗಜಶಿರ್ ಲಾಯೆ।।15।। ಬಾಲಕ ಕೆ ಧಡ ಊಪರ ಧಾರಯೋ। ಪ್ರಾಣಮಂತ್ರ ಪಡಿ ಶಂಕರ ಡಾರಯೋ।। ನಾಮ 'ಗಣೇಶ' ಶಂಭು ತಬ ಕೀನ್ ಹೇ।।16।। ಪ್ರಥಮ ಪೂಜ್ಯ ಬುದ್ಧಿ ನಿಧಿವರ್ ದಿನಹೇ।। ಬುದ್ಧಿ ಷರೀಕ್ಷಾ ಜಬ ಶಿವ ಕೀನ್ಹಾ। ಪೃಥ್ವೀ ಕರ್ ಪ್ರದಕ್ಷಿಣಾ ಲೀನ್ಹಾ।। ಚಲೇ ಷಡಾನನ, ಭರಮಿ ಭುಲಾಯೀ। ರಚೆ ಬೈಠಿ ತುಮ ಬುದ್ಧಿ ಉಪಾಯೀ।।7।। ಚರಣ ಮಾತ-ಪಿತಕೆ ಧರ್ ಲೀನ್ಹೆ। ಕಿನಕೇ ಸಾತ್ ಪ್ರದಕ್ಷಿಣ ಕೀನ್ಹೆಂ।। ಧನ ಗಣೇಶ ಕಹಿ ಶಿವ ಹಿಯ ಹರ್ಷ್ಯೋ। ನಭಸ್ತೇ ಸುರನ ಸುಮನ ಬಹು ವರ್ಷ್ಯೋ।।18।। ತುಮ್ಹಾರೀ ಮಹಿಮಾ ಬುದ್ಧಿ ಬಡಾಯಿ। ಶೇಷ ಸಹಸ ಮುಖ ಸಕೆ ನ ಗಾಯಿ।। ಮೈ ಮತಿ ಹೀನ ಮಲೀನ ದುಖಾರೀ। ಕರಹೂ ಕೌನ್ ವಿಧಿ ವಿನಯ ತುಮ್ಹಾರೀ।।19।। ಭಜಕ 'ರಾಮ ಸುಂದರ್' ಪ್ರಭುದಾಸಾ। ಜಗ ಪ್ರಯಾಗ ಕಕರಾ ದೂರ್ವಾಸಾ।।

ಅಬ್ ಪ್ರಭು ದಯಾ ದೀನ ಪರ್ ಕೀಜೆ। ಅಪನಿ ಭಕ್ತಿ ಶಕ್ತಿ ಕುಛ್ ದೀಜೆ॥20॥
॥ದೋಹಾ ॥ ಶ್ರೀಗಣೇಶಾ ಯಹ್ ಚಾಲೀಸಾ। ಪಾಠ ಕರ್ಯೆ ಧರ್ ಧ್ಯಾನ್। ನಿತನವ ಮಂಗಲ ಗೃಹ ಬಸ್ಯೆ। ಲಹ್ಯೆ ಜಗತ್ ಸನಮಾನ್॥21॥ ಸಂಬಂಧ ಅಪನಾ ಸಹಸ್ರ ದಶ। ಋಷಿ ಪಂಚಮೀ ದಿನೇಶ। ಪೂರಣ ಚಾಲೀಸ್ ಭಯೋ। ಮಂಗಲ ಮೂರ್ತಿ ಗಣೇಶ॥22॥

## ಲಾಲಿ ಗಣಪತಿಗೆ (ಲಾಲಿ) ರಾಗ: ನೀಲಾಂಬರಿ

ಲಾಲಿ ಗಣಪತಿಗೆ ಲಾಲಿ। ಭೂಪತಿಗೆ ಲಾಲಿ ಪಾರ್ವತಿ ಸುತಗೆ ಲಾಲಿ। ಜಗತ್ಪತಿಗೆ ಲಾಲೀ॥ಪ॥ ಲಕ್ಷ್ಮೀ ಸರಸ್ವತೀ ಅರುಂಧತಿಯರನು ಕರೆಸೀ। ಅಚ್ಚ ಮುತ್ತು ಬಿಗಿದ, ತೊಟ್ಟಿಲನು ತರಿಸೀ। ಹಚ್ಚಿ ಕುಂಕುಮ ಗಂಧ ಪುಷ್ಪಗಳನಿರಿಸೀ। ಪುಟ್ಟ ಗಣಪತಿಯ ತೊಟ್ಟಿಲೊಳಿರಿಸೀ॥1॥ ಅಷ್ಟ ದಿಕ್ಪಾಲಕರ ಕಂಬಗಳ ಮಾಡೀ। ಆಕಾಶವನುಚಪ್ಪರವಮಾಡಿ। ಆದಿಶೇಷನನು ಹಗ್ಗವಮಾಡೀ। ಮೂಷಕದ ಮಣೆ ಮೇಲೆ ತೊಟ್ಟಿಲಾನಿಟ್ಟೂ॥2॥ ಚಂದ್ರಸೂರ್ಯರೆಂಬೊ ಜ್ಯೋತಿಗಳ ಹಚ್ಚಿ। ವಾಯುದೇವರ ಕರೆಸಿ ಚಾಮರವ ಬೀಸೀ। ಶೇಷನಾ ಹೆಡೆಯನೂ ಛತ್ರಿಯಾಗಿರಿಸಿ। ಋಷಿಪತ್ನಿಯರನೆಲ್ಲ ಅರ್ಥಿಯಿಂಕರೆಸೀ॥3॥ ಅಷ್ಟ ಸತಿಯರಿಗೆಲ್ಲ ಕೊಟ್ಟು ಕುಂಕುಮಾವೀಳ್ಯ। ತಟ್ಟನೆ ತೂಗಿದಳು। ಹೇಳುತಲಿ ಜೋಗುಳವಾ। ಸೃಷ್ಟಿಗೊಡೆಯ ಕರಿಘಟ್ಟದ್ವೆಂಕಟರಮಣನಾ। ಹೃದಯವಾಸಿಯಾದ ಹರನ ಪುತ್ರನಿಗೇ॥4॥

## ಶ್ರೀ ಮಹಾಗಣಪತಿಗೆ ದುರ್ಗೆಗೆ ಆರತಿ (ಅಂಬಾಗಣಪರ ಆರತಿ ಹಾಡು)

ಶ್ರೀ ಮಹಾಗಣಪತಿಗೆ ದುರ್ಗೆಗೆ ಆರತಿ ಎತ್ತುವೆವು। ಕೈಲಾಸವಾಸ ಪರಮೇಶ್ವರ ಸುತ ಪಾರ್ವತಿ ತನಯ ಗಜಮುಖ ಗಣರಾಜ॥ ಮೂಷಿಕ ವಾಹನನೆ ಕರುಣಿಸು ಷಣ್ಮುಖ ಸೋದರನೆ ಸರ್ವಕಾರ್ಯಗಳಿಗು ಮೊದಲಾಗಿ ನಿಮ್ಮನು ಏಕೋಭಾರದಿ ನಂಬಿ ಪೂಜೆಯ ಗೈವೆವು॥1॥ ಇಷ್ಟವ ಸಲಿಸುವಿರಿ ಬೇಗದಿ ಕಷ್ಟವ ಕೊಡುವರಲ್ಲ ಕಾಲವ ಕಳೆಯದೆ ಲೀಲಾವಿನೋದದಿ ಸಾಲಾಗಿ ತೋರುವ ಬಳಗವ ಕೂಡುತ॥2॥ ನಿತ್ಯನಿತ್ಯವು ಪೂಜೆಯ ಗೈವೆವು ಅತ್ಯಂತ ಹರುಷದಿ ಸಾರಸನೇತ್ರೆಗೇ ಕಾರುಣ್ಯ ವಾರಿಧಿಗೆ ಸತ್ಯ ಸ್ವರೂಪಿಣಿ ನಿತ್ಯ ಮಂಗಳೆಗೆ॥3॥

## ಗಜಮುಖನಿಗೆ ಗಣಪನಿಗೆ (ಆರತಿ) ರಾಗ: ಸುರುಟಿ

ಗಜಮುಖನಿಗೆ ಗಣಪನಿಗೆ ಚೆಲ್ವ ಗಜಗಮನೆಯರಾರುತಿ ಎತ್ತಿರೆ॥ಪ॥ ವಿಘ್ನೇಶ್ವರನಿಗೆ ಸಿದ್ಧಿದಾಯಕನಿಗೆ ವಿದ್ಯೆಬುದ್ಧಿಗಳೆಲ್ಲಾ ಕೊಡುವವಗೇ। ಮುದ್ದು ಮುಖದ ಶ್ರೀ ಸೊಂಡಿಲಗಣಪಗೆ ವಜ್ರ ಮಾಣಿಕ್ಯದಾರುತಿ ಎತ್ತಿರೆ॥1॥ ಮೂಷಕವಾಹನಗೆ ಪಾಶಾಂಕುಶಧರನಿಗೆ ದೇಶ ದೇಶದಿ ಪೂಜೆಯಗೊಂಬುವಗೇ। ಈಶ್ವರನಾ ಸುತ ಸೊಂಡಿಲ ಗಣಪಗೆ। ಮುತ್ತು ಮಾಣಿಕ್ಯದಾರುತಿ ಎತ್ತಿರೆ॥2॥ ನಂದಿವಾಹನನಿಗೆ ನಾಗಭೂಷಣನಿಗೆ ಚಂದ್ರಗೆ ಶಾಪವನಿತ್ತವಗೆ। ನಂಜನಗೂಡಲ್ಲಿ ಸ್ಥಿರವಾಗಿ ನೆಲಸಿಹ ನಂಜುಂಡನ ಕುಮಾರನಿಗೆ॥3॥

## ಮುತ್ತಿನಾರತಿ ಎತ್ತಿ ಗೌರಿಪುತ್ರನಿಗೆ (ಆರತಿ) ರಾಗ: ಶಂಕರಾಭರಣ

ಮುತ್ತಿನಾರತಿ ಎತ್ತಿ ಗೌರಿಪುತ್ರನಿಗೆ ಗಣಪಗೆ॥ಪ॥ ಮಿತ್ರೆರೆಲ್ಲರು ನಲಿದು ನವರತ್ನದ ತಟ್ಟೆ ಪಿಡಿದು ಈಗಲೆ ಎತ್ತಿರಾರತಿ॥ಅ.ಪ.॥ ಭೂತಗಣಗಳ ಅಧಿಪತಿಗೆ। ನಮ್ಮನು ರಕ್ಷಿಪ ಭೂಪತಿಗೆ। ಸಾರಸಾಕ್ಷಿಯರ್ ಎಲ್ಲ ನೆರೆದು। ಗಿರಿಜೆ ಕುಮಾರಗೀಗಲೆ ಎತ್ತಿರಾರತಿ॥1॥ ಕಾಮಕ್ರೋಧಗಳ್ ಎಂಬ ತಟ್ಟೆಗೆ। ಮೆರೆವೊ ಭಕ್ತಿ ಜಲವನು ಹಾಕುತಲಿ। ಸುಜ್ಞಾನವೆಂಬ ಜ್ಯೋತಿ ಬೆಳಗಿ। ಮನದಿಷ್ಟವೆಂಬ ಕರ್ಪೂರ ಉರಿಸುತೀಗ॥2॥

## ಮುತ್ತಿನಾರತಿ ಎತ್ತಿರೀಗ (ಆರತಿ) ರಾಗ: ಕಾಂಭೋದಿ

ಮುತ್ತಿನಾರತಿ ಎತ್ತಿರೀಗ। ಫಾಲನಯನ ಸುತ ಗಜವದನನಿಗೆ॥ಪ॥ ಪಾಶಾಂಕುಶಧರ ನಾಶ ರಹಿತ ಪರಮೇಶಕುಮಾರ। ಕ್ಲೇಶವಿದೂರನಿಗೆ॥1॥ ಫಣಿವರ ಭೂಷಣ। ಪ್ರಣತ ಸುಪೋಷಣ। ತ್ರಿನಯನ ಸುತ ಶ್ರೀವರಗಣನಾಥನಿಗೆ॥2॥

### ಮಂಗಳ ಜಯಜಯ (ಮಂಗಳ) ರಾಗ: ಸುರುಟಿ

ಮಂಗಳ ಜಯಜಯ ಕರಿಮುಖ ದೇವಗೆ। ಮಂಗಳ ಜಯ ಜಯತು। ಮಂಗಳ ಜಯಜಯ ವಿಘ್ನೇಶ್ವರನಿಗೆ। ಮಂಗಳ ಜಯಜಯತು ।।ಪ।। ನಿರುಪಮ ಸದ್ಗುಣಭರಿತ ಎನಿಪ ಬಿರುದನು ಪಡೆದವಗೆ। ಕರುಣಿ ಕೋಟಿ ಶತತೇಜದಿ ಮೆರೆಯುವ। ಪರಶಿವ ಸುತ ಲಂಬೋದರಗೆ।।1।। ಸಂಕ್ರಂದನ ಸುರ ಸಂಕುಲ ಪಾಲಕ। ಪಂಕಜಯುಗಳನಿಗೇ। ವೆಂಕಟರಮಣ ಸುಕಿಂಕರ ಪೋಷಿತ। ಶಂಕರಿ ಮನ ಪರಿತೋಷನಿಗೆ।।2।। ಬೇಡಿದವರಿಗಿಷ್ಟಾರ್ಥವಾ ಮೋದದಿ। ಕೊಡುತಿಹ ಮೂರ್ಜಗ ಪಾಲನಿಗೆ। ರಾಜಕಪುರದಿ ವಿರಾಜಿಸುತಿರುತಿಹ। ಗಣಾಧೀಶ್ವರ ಗಣನಾಥನಿಗೆ।।3।।

### ಗಜಾನನಾಯ ಗಾಂಗೇಯಸಹಜಾಯ (ಗಣಪತಿ ಮಂಗಳಾಷ್ಟಕ)

ಗಜಾನನಾಯ ಗಾಂಗೇಯಸಹಜಾಯ ಸದಾತ್ಮನೇ। ಗೌರಿಪ್ರಿಯ ತನೂಜಾಯ ಗಣೇಶಾಯಾಸ್ತು ಮಂಗಳಂ।। ನಾಗಯಜ್ಞೋಪವೀತಾಯ ನತವಿಘ್ನ ವಿನಾಶಿನೇ। ನಂದ್ಯಾದಿ ಗಣನಾಥಾಯ ನಾಯಕಾಯಾಸ್ತು ಮಂಗಳಂ।। ಇಭವಕ್ತ್ರಾಯ ಚಂದ್ರಾದಿ ವಂದಿತಾಯ ಚಿದಾತ್ಮನೇ। ಈಶಾನ ಪ್ರೇಮ ಪಾತ್ರಾಯ ಚೇಷ್ಟದಾಯಾಸ್ತು ಮಂಗಳಂ।। ಸುಮುಖಾಯ ಸುಶುಂಡಾ ಗ್ರೋಕ್ಷಿಪ್ತಾಮೃತಘಟಾಯಚ। ಸುರಬೃಂದ ನಿಷೇವ್ಯಾಯ ಸುಖದಾಯಾಸ್ತು ಮಂಗಳಂ।। ಚತುರ್ಭುಜಾಯ ಚಂದ್ರಾರ್ಧ ವಿಲಸನ್ಮಸ್ತಕಾಯಚ। ಚರಣಾವನತಾನಂತ ತಾರಾಣಾಯಾಸ್ತು ಮಂಗಳಂ।। ವಕ್ರತುಂಡಾಯ ವಟವೇ ವಂದ್ಯಾಯ ವರದಾಯಚ ವಿರೂಪಾಕ್ಷ ಸುತಾಯಾಸ್ತು ವಿಘ್ನನಾಶಾಯ ಮಂಗಳಂ।। ಪ್ರಮೋದಾಮೋದರೂಪಾಯ ಸಿದ್ಧಿ ವಿಜ್ಞಾನ ರೂಪಿಣೇ। ಪ್ರಕೃಷ್ಟ ಪಾಪನಾಶಾಯ ಫಲದಾಯಾಸ್ತು ಮಂಗಳಂ।। ಮಂಗಳಂ ಗಣನಾಥಾಯ ಮಂಗಳಂ ಹರಸೂನವೇ। ಮಂಗಳಂ ವಿಘ್ನರಾಜಾಯ ವಿಘ್ನಹರ್ತ್ರೇಸ್ತು ಮಂಗಳಂ।। ಶ್ಲೋಕಾಷ್ಟಕಮಿದಂ ಪುಣ್ಯಂ ಮಂಗಳಂ ಪ್ರದಮಾದರಾತ್। ಪಠಿತವ್ಯಂ ಪ್ರಯತ್ನೇನ ಸರ್ವವಿಘ್ನ ನಿವೃತ್ತಯೇ। ಇತಿ ಗಣಪತಿಮಂಗಳಾಷ್ಟಕಂ ಸಂಪೂರ್ಣಂ।।



## 39. ಎಳೆಯಷ್ಟಮಿ ವ್ರತ

### ಇಂದಿರೆ ನಿನ್ನ ಪೂಜೆ ಇಂದು

ಇಂದಿರೆ ನಿನ್ನ ಪೂಜೆ ಇಂದು ಮಾಡುವೆನು ನಾನು। ಮಂದಹಾಸದಿ ಮೋದದಿಂದಲ್ಲೇ ನೋಡುತ ಹರಿಯ।।ಪ।। ಮಂದಾರ ಮಲ್ಲಿಗೆ ಕುಂದಾರ ಕುಸುಮಗಳನ್ನು। ತಂದೂ ನಿಂತಿರುವೆನು ಸುಂದರ ಸರಸಿಜೆ ಮುಡಿಯೆ।।1।। ಜರದ ಪೀತಾಂಬರ ಕರದಲ್ಲೆ ತಂದಿರುವೆ। ಎರಕೊ ಹರಿಯ ಕೂಡ ಸರಸಿಜದಳ ನೇತ್ರೆ।।2।। ಹರಡಿಕಂಕಣಗುಂಡು ಹೆರಳು ಬಂಗಾರವನ್ನು। ಹರುಷಾದಿಂದಲ್ಲಿ ಕೃಷ್ಣನರಸಿ ತಂದಿಹೆ ನಿನಗೆ।।3।। ಗಂಧಾಕುಂಕುಮ ವೀಳ್ಯಾ। ಬುಂಧ್ಯೆ ಭಕ್ಷಗಳನ್ನು ಬಂದು ಹರಿಯ ಕೂಡಾನಂದದಿಭುಂಜಿಸಿ ಬೇಗ।।4।।ಚಂದ್ರಶೇಖರ ಸುರವಂದಿತ ಚರಣೆ। ಇಂದರೇಶನ ಕೂಡ ಬಂದಿಲ್ಲಿ ತೋರಿಸು ಮುಖವನು।।5।।

### ಪೂಜೆ ಮಾಡೋಣ ಬನ್ನಿರೇ

ಪೂಜೆ ಮಾಡೋಣ ಬನ್ನಿರೇ ಶ್ರೀ ಲಕ್ಷ್ಮೀಯ ಪೂಜೆಯ ಮಾಡೋಣ ಬನ್ನಿರೆ ಪೂಜೆ ಮಾಡೋಣ ಬನ್ನಿ ಮೂರ್ಜಗ ಜನನಿಯ ರಾಜರಾಜೇಶ್ವರಿ ಎನ್ನುತ ಶ್ರೀ ಲಕ್ಷ್ಮೀಯ।।ಪ।। ಊರುಶ್ರಿಂಗಾರವಾಗಲಿ ಉತ್ತುಮ ತಳಿರುತೋರಣ ಕಟ್ಟಲೀ। ನಾರಿ ಲಕ್ಷ್ಮೀಯ ಬರುವ ಸಮಯಕ್ಕೆ ಕಾಯಿವಡೆದು ಕದಲಾರುತಿ ಎತ್ತಿರೆ।।1।। ಮಿಂದು ಮಡಿಯನುಟ್ಟು ಪೂಜಾದ್ರವ್ಯ ದಿಂದ ವಿಪ್ರರ ಕರಸಿ ಛಂದುಳ್ಳ ದೀಪದ ಸಾಲು ಬೆಳಕಿನಿಂದ। ಇಂದಿರಾಪತಿಪ್ರಿಯೆ ಲಕ್ಷ್ಮೀಯ ಪೂಜೆಯ।।2।। ಹಸ್ತಪಾದವ ತೊಳೆದು ವಸ್ತ್ರದಲೊರೆಸಿ ಆಚಮನವ ಮಾಡಿಸಿ ಕತ್ತರಿಸಿದಾ ಅಡಕಿ ಬಿಳಿ ಎಲೆ ಎಲಕ್ಕಿ ಕಸ್ತೂರಿ ಬೆರೆಸಿದ

ಮುತ್ತಿನ ಸುಣ್ಣವನಿಟ್ಟು॥3॥ ಗಂಧ ಅಕ್ಷತೆ ಪುಷ್ಪವು ಗೆಜ್ಜೆ ವಸ್ತ್ರ ಥಂದಾದ ಅರಿಷಿಣ ಕುಂಕುಮಾ। ಅಂದದ ಕರಿಮಣಿ ಬಿಚ್ಚೋಲೆ ಬಳಿಯನಿಟ್ಟು। ಮಂದಾರ ಮಲ್ಲಿಗೆ ಮಾಲೆಯು ಮುಡಿಸಿ॥4॥ ಮಂದಾರ ಶೇವಂತಿಗೆ ಜಾಜಿ ಪುಷ್ಪವ ತಂದು ಕೇದಿಗೆಗಳನು ಥಂದುಳ್ಳ ಮರುಗ ದವನ ಪುನ್ನಾಗವನ್ನು ಅಂಬೆ ಸಮರ್ಪಿಸುವೆ ಇಂದು ಸ್ವೀಕರಿಸಮ್ಮ ॥5॥ ಸಾಲು ದೀವಿಗೆಯ ಹಚ್ಚಿ ಪುಷ್ಪಗಳಿಂದ ಶ್ರೀಲಕ್ಷ್ಮೀಯ ಪೂಜಿಸಿ। ಪಾಲು ಮಾಡಿದ ಕಾಯಿ ಫಲಗಳು ಅರ್ಪಿಸಿ ದುಂಡುಮಲ್ಲಿಗೆ ಹೂವಿನ ದಂಡೆಯ ಮುಡಿಸಿ॥6॥ ಹೋಳಿಗೆ ಹೊಸ ಬೆಣ್ಣೆಯ ಕಾಸಿದ ತುಪ್ಪ ಸಾರು ಸಾಸಿವೆಗಾಯಿಯ ವೇಣುಗೋಪಾಲ ಶ್ರೀಕೃಷ್ಣನೊಲ್ಲಭೆ ನೀನು ಆ ಹರಿಯೊಡ ಗೂಡಿ ಆರೋಗಣೆಯ ಮಾಡು॥7॥ ತಾಂಬೂಲವನ್ನು ಕೊಡುವೆ ಅಂಬುಜ ಪಾಣಿ ಮಂಗಳಾದಾಯಕಿಯೆ। ಹಿಂಗದೆ ಸೌಭಾಗ್ಯವನ್ನು ಕೊಟ್ಟು ಮಗಳೆಂದು ಮುಂದೆ ಕರೆದು ಎನ್ನ ಕಂದಳೆಂದು ಕಾಯೇ॥8॥ ನಿತ್ಯಪ್ರದಕ್ಷಿಣೆ ನಮಸ್ಕಾರ ಚಿತ್ತದೊಲ್ಲಭೆ ನಿನಗೆ ಅಪ್ಪಹರಿಗೆ ಪೇಳಿ ಅಖಿಳ ಪದವಿಯನ್ನು ವಪ್ಪಿಸಮ್ಮ ಭೀಮೇಶ ಕೃಷ್ಣನ ಮಡದಿ॥9॥

## ಅಷ್ಟಮಿ ಗೌರಿಪೂಜೆ ಮಾಡಿದಳು (ಆರತಿ)

ಅಷ್ಟಮಿ ಗೌರಿಪೂಜೆ ಮಾಡಿದಳು ಸುಭದ್ರಾ ಅಚ್ಚಮುತ್ತಿನ ಆರುತಿ ಎತ್ತೊಳು॥ಪ॥ ಅಚ್ಚುತಾನ ದಯಾದಿಂದ ಅತಿ ಭಕ್ತಿಯಿಂದಭದ್ರಿ ಮುತ್ತಿನಾರುತಿ ಎತ್ತಿ ಬೆಳಗೊಳು ಮುತ್ತೈದಿತನವನು ಪಡೆದಳು॥ಅ.ಪ॥ ಕ್ಷತ್ರಿಯರು ಚೈಸಿಬರುವರೂ ಪಾಂಡವರಿಗೆ ಅಪಮೃತ್ಯುಬರಲು ಅಂಜಿಹೋಗಲು। ಮುತ್ತಿನಾರುತಿ ಎತ್ತಿ ಬೆಳಗೊಳು ಮುತ್ತೈದಿತನವ ಪಡೆದಳು॥1॥ ಇಂದ್ರನಂದನನ ಸತಿಯು ಸುಭದ್ರಾಮಿಂದುಮಡಿಯನುಟ್ಟು ಬಂದಳು। ಗಂಧಕುಂಕುಮ ಪರಿಮಳದ ವಸ್ತ್ರ ಥಂದದಿಂದ ದೀಪ ಧೂಪ ದುಂಡುಮಲ್ಲಿಗೆ ಮಾಲೆ ಮುಡಿಸಿ ಮಂಗಳಾರುತಿ ತಂದು ಬೆಳಗೋಳು॥2॥ ಭಗಿನಿ ಕೇಳೆ ಭಾವಶುದ್ಧದೀ ಭಾದ್ರಪದ ಶುದ್ಧ ಅಷ್ಟಮಿ ಗೌರಿ ಕಥೆಯನ್ನು। ದೊರೆಯು ಹಿರಿಯ ಹೆಂಡತಿಯಾಪುರದ ಹೊರಗೆ ಇಟ್ಟಿರಲು ಶಿರಿದೇವಿ ಧಾರಕಟ್ಟೆ ದೊರೆಗೆ ಒಲಿದು ಸಿರಿಯು ಬಂದು॥3॥ ಪಂಚಬಾಣನ ಪಿತಗ ನಮಿಸೊಳು ಸುಭದ್ರಾ ಮುಂಚೆ ಕರವ ಮುಗಿದು ಎತ್ತೊಳು। ಪಾಂಚಾಲಿ ದೊರೆಗಳು ಸಹಿತ ಷಿನದ ವಳಗ ದಿನವಕಳೆಯ ಆಗ ವನವಾಸವನ್ನು ಗೆದ್ದು ಬರುವ ತೆರನ ನೋಡ॥4॥ ಪಂಚಭಕ್ಷ ಪಾಯಸ ಘೃತಗಳೂ ಹೆಳವನಕಟ್ಟೆರಂಗನ ಸತಿಗೆ ಮುಂಚೆ ಎಲಿಯ ಹಾಕಿ ಬಡಿಸೋರು। ಶಂಕರ ಗಂಡಾನ ಕಥೆಯ ಕೇಳಿ ಕಂಕಣ ಕೈಗೆ ಧಾರ ಕಟ್ಟೆ ಪಂಕಜಾಕ್ಷನಾಭನ ತಂಗಿ ಶಂಕೆ ಇಲ್ಲದೆ ಭಾಗ್ಯವ ಪಡೆದಳು॥5॥

## ಗಿರಿಜೆಯ ವರಸುತಗೆರಗಿ (ಶಂಕರಗಂಡನ ಹಾಡು-ಎಳೆಯಷ್ಟಮಿಕಥೆ)

ಗಿರಿಜೆಯ ವರಸುತಗೆರಗಿ ವಂದಿಸುವೆ। ಸರಸ್ವತಿಗಭಿವಂದಿಸುವೆ। ಪರಮದಯಾಳು ಹೆಳವನಕಟ್ಟೆ ವೆಂಕಟ। ಒಡೆಯನ ನೆನೆ ಮನದಲ್ಲಿ ॥1॥ ತಾನರಸುತ ಶಂಕರಗಂಡ ತಂಗಿಗೆ। ವಿವಾಹ ಮಾಡಬೇಕೆನುತ। ಭಾವಮೈದುನರಾದ ಕಥೆಯ ನಾ ಪೇಳುವೆ ತಾವೆಲ್ಲ ಕೇಳಿ ಸಜ್ಜನರು॥2॥ ಕೈಲಾಸಪುರದ ರಾಜ್ಯದೊಳಗಾಳುವ। ನಿರ್ಭಯದಲಿ ನಾಲ್ಕಾವತಿಯು। ತ್ರೈಲೋಕ್ಯವಂದ್ಯ ಶಂಕರ ಗಂಡನಿಂದತಿ। ನಿಂತಾನೆ ಜಯಪಾಲಿಸುತಾ॥3॥ ಅರಗಿಣಿ ಆಡಿಸುವೊಳ್ ಕೆಂಜೆಟೆಗಳನು। ಮರಿಹಾವುಗಳ ಮರುಗ್ಗುವಳು। ನಳಿನಾಕ್ಷಿ ತನ್ನ ಸಂಪತ್ತುಗಳೆಲ್ಲವ ಬೆರಸಿ। ಗೊಂಬೆ ಆಟವನೆ ಆಡುವಳು॥4॥ ಆಡೋಳು ಪಂಚಪಗಡೆ ತನ್ನ ಮನೆಯಲ್ಲಿ। ಕೂಡಿದ್ದ ಕವಿಜನರೊಡನೆ। ಪಾಡೋಳು ಮರಿಕೋಗಿಲೆಯಂತೆ ತಂಗಿಯ। ನೋಡಿದನವಾಂತವನಾ॥5॥ ನಿತ್ಯನಿತ್ಯದಲ್ಲಿ ಯೌವನಗಾಳು ಜಗಳಿಸುತ್ತ। ಯುಕ್ತ ಕುಚವು ತೋರಿದುವು। ಮಿತ್ರೆ ತಂಗಿಗೆ ತಕ್ಕ ವರನ್ಯಾವನೆನುತಲಿ। ಚಿತ್ತದೊಳಗೆ ಚಿಂತಿಸಿದಾ॥6॥ ಪದ್ಮನಾಭನು ತಂಗಿಗೆ ವರನಹನೆಂದು। ಚದುರ ಚನ್ನಿಗನು ಮನ್ಮಥನು। ಕದಲಿಸಿ ಬುದ್ಧಿವಂತರ ಕಳುಹಿಸಿ ನಾಳೆ। ಉದಯಕ್ಕೆ ಕರೆತನ್ನಿರೆಂದಾ॥7॥ ಅಂದು ವಿಳಾಸ ಪಟ್ಟಣದಲ್ಲಿ ಮನ್ಮಥಗೆ। ನಿಂದು ಎದ್ದು ಕರವ ಮುಗಿದು। ಇಂದು ಶಂಕರ ಗಂಡ ಕರೆಸಿದ ನಿಮ್ಮನು। ಹಾಗೆಂದು ಪೇಳಿದರೆ ಮನ್ಮಥನಿಗೇ॥8॥ ಬಂದವರಿಗೆ ಶೀಘ್ರ ಊಟಗಳನೆ ಮಾಡಿ। ಭಟ ತಮ್ಮಟೆ ಭೇರಿಯಿಂದಾ। ಯಡಬಲದಲ್ಲಿ ತನ್ನ

ಮಾರ್ಬಲ ಸಹಿತಾಗಿ। ನೆಡೆದನೆ ನಾಲ್ಕಾರವತಿಗೆ॥9॥ ತಂದು ಗುದ್ದುಗೆಯ ಭಾವಡಿಯಲ್ಲಿ ಹಾಸೋರು। ಸಂಭ್ರಮದಿ ಕುಳ್ಳಿಪರು। ಹೊಂಬಣ್ಣದರಿವಾಣದೊಳಗೆ। ತಾಂಬೂಲವ। ತಂದು ಇಡೋರೆ ಮನ್ಮಥಗೆ॥10॥ ಕಂಡು ಬಿಡಾರವ ತಂಡತಂಡದಿ ನಿಲಿಸಿ। ವಂದಿಸಿ ಮಾತಾಡಿಕೊಂಡು। ಭೂಮಂಡಡಲಿಕ್ಷೇಮವೆನುತ ಶಂಕರ ಗಂಡ। ಕೇಳಿದನೆ ಮನ್ಮಥಗೆ॥11॥ ನಿಮ್ಮ ಕಾರುಣ್ಯ ಕೃಪೆಯಿಂದತಿ ವೃತ್ತಿಯು। ನಮ್ಮ ರಾಜ್ಯವು ಕ್ಷೇಮ ಎನಲು। ಸಂಭ್ರಮದಿಂದುಪಚಾರಗಳನೆ ಮಾಡಿ। ಬೊಮ್ಮನು ನಿಜಶಂಕರಗೆ॥12॥ ರುಕ್ಮಿಣಿ ತನುಜ ಮದನ ಸಹಿತಾಗಿ। ಪಂಚಭಕ್ಷಭೋಜನವ ಮಾಡಿಸಿದಾ। ಲಕ್ಷಣವಂತಿ ತನ್ನ ವಧುವಾಗಬೇಕೆಂದು। ಅಪೇಕ್ಷಿಸಿದನು ಮನ್ಮಥನು॥13॥ ಸರ್ವಲಕ್ಷಣವುಳ್ಳ ಸರಸಿಜನೇತ್ರಿಯು। ಒಬ್ಬಳೆ ರತಿ ನನ್ನ ತಂಗಿ। ಹಬ್ಬಹುಣ್ಣಿಮೆಗೆ ಕಳುಹದೆ ನಮ್ಮನು। ನಿರ್ಭಂದ ಪಡಿಸುವಿರೆಂದಾ॥14॥ ಅನುಮಾನ ಮಾಡುವುದ್ಯಾಕೋ ನೀನಿಷ್ಟೆಂದು ನಮಗೆ ಸ್ವತಂತ್ರವೆಲ್ಲಿಹುದು। ನೆನಸಿದಾಗಲೆ ಕೊಟ್ಟು ಕಳುಹುವೆ ನಿಮ್ಮನೆಗೆಂದು। ಮನಸಿಜ ನುಡಿದ ದೈನ್ಯದಲಿ॥15॥ ಹಾಗಾದರಾಗಲಿ ಎನುತ ರಾಯಸಕೂಟ। ಬೇಗದಿಂದಲಿ ನೋಡಿಸಿದಾ। ಭಾಗೀರಥಿ ತನ್ನ ನಗರತಿದೇವಿಗೆ। ಆಗ ನೇಮವ ಮಾಡಿದರು॥16॥ ಬಲ್ಲಿದ ಶುಭಲಗ್ನವ ನೋಡಿ ಬುಧಜನರು। ಎಲ್ಲರು ನೆರೆದು ಸಂಭ್ರಮದೀ। ಮಲ್ಲಿಗ್ಹೂವಿನ ಸರ ನಗರತಿದೇವಿಗೆ। ಕಲ್ಯಾಣವನೆ ಮಾಡಿದರು॥17॥ ಸೆಳೆಮಂಚ ಸುಪ್ಪತ್ತಿಗೆ ಸುವರ್ನದ। ತಳಿಗೆ ಬಟ್ಟಲು ಗಿಂಡಿಯನ್ನು। ಬಳಲ ಮುಡಿಯನು ಸಲಿಸುವ ಗೆಳತೀರ। ಬಳವಳಿ ತಂಗಿಗೆ ಕೊಟ್ಟ॥18॥ ಸಹಸಿರ ಗೋವು ಗಜವು ತುರಂಗವು। ಬೇಸರದಿ ತಂಗಿಗಿತ್ತ। ಲೇಸಾದ ಊರು ಉಮ್ಮಳಿಗೆಯ ಕೊಟ್ಟು ತಂಗಿಗೆ। ವಿಳಾಸಪಟ್ಟಣಕೆ ಕಳುಹಿದನು॥19॥ ಮನ್ಮಥರಥಿದೇವಿ ವಿಳಾಸಪಟ್ಟಣದಲ್ಲಿ। ಉನ್ನಂತದಿನ ಬಾಳುತಿರಲು। ಇನ್ನೊಮ್ಮೆ ನೋಡಬೇಕೆನುತ ಶಂಕರಗಂಡ। ತನ್ನೊಳು ತಾನೆ ಯೋಚಿಸಿದಾ॥20॥ ದಿಗ್ಗಲು ಮರಿ ಮೆಟ್ಟಿದ ಕೈಯಲಿ ದೊಡ್ಡ। ಕುಡುಗೋಲು ಕಾವಣೆಯನ್ನು। ಹೆಗಲು ಮೇಲಿನ ಬಾರುಕೋಲು ಮನ್ಮಥರಾಯ। ನಗುವಂತೆ ಮಾಡಿ ರೂಪವನು॥21॥ ನೋಡೆಲೆರತಿ ನಿನ್ನ ಒಡಹುಟ್ಟಿದಣ್ಣನು। ರೂಢಿಯೊಳಗೆ ಅತಿ ಚೆಲುವ। ರೂಡಿಗರುವನೆ ಮೆಚ್ಚಿ ಗಮನಕೆ ಬರುತಾನೆ। ನೋಡೆಂದು ಸತಿಗೆ ತೋರಿದನು॥22॥ ಬಡವನಲ್ಲವು ಆತ ಬಲು ಪರಾಕ್ರಮಶಾಲಿ। ಒಡಹುಟ್ಟಿದಣ್ಣ ಮುನಿದರೆ। ಕೆಡುವೋದು ನಿಮ್ಮ ಐಶ್ವರ್ಯವು ಆತನ। ಗೊಡವೆ ನಿಮಗೆ ಬೇಡಿರೆಂದ್ಲು॥23॥ ಕಾಂತೆಯ ಮಾತನು ಕೇಳಿ ಅಂಗದನು। ಯಾವ ಕಾರಣ ಹೇಳೆಂದ। ದಿವಕರ ಪ್ರಭೆಯಂತೆ ಬೆಳಗುವ ಸಮಯಕ್ಕೆ। ತವಕದಿಂದಲಿ ಬಂದು ನಿಂತ॥24॥ ಕಣ್ಣೆತ್ತಿ ನೋಡಲಿಲ್ಲವು ಆತನ ಕೂಡೆ। ಗರುವದಿಂದ ಮಾತಾಡಲಿಲ್ಲ। ಎಲೆ ಕಾಮದೇವ ಎನ್ನುನಜೆಯ ಕಳುಹೆಂದು। ಒಲವಿಂದ ತಾನೆ ಕೇಳಿದನು॥25॥ ಹಾಸು ಮಂಚ ಸೆಳೆಮಂಚ ಸುಪ್ಪತ್ತಿಗೆ। ಯಾವಾಗಲೂ ನಮ್ಮ ಮನೆಯಲ್ಲಿ। ಭಾಮಕಿ ಜೋಳದನ್ನವನುಣ್ಣಲಾರಳು। ನಾವೀಗ ಕಳುಹುವೊರಲ್ಲ॥26॥ ಗೌರಿದೇವಿ ಲಕ್ಷ್ಮೀದೇವಿ ಭಾರತೀದೇವಿ। ತೌರುಮನೆಯ ಬಯಸುವರು। ಅವರ ಮನೆಲಿದ್ದ ಅಂಬಲಿಯುಂಡು ಬಹಳ। ಸಂಭ್ರಮದಿಂ ಬಾಹೊ ರೆಂದಾ॥27॥ ಹೆಚ್ಚು ಮಾತಾಡುವದ್ಯಾಕೊ ನೀ ಮುನಿದರೆ। ಜೋಳವ ಕೊಂಡು ಹೋಗೆಂದ। ಬ್ಯಾಡಲೊ ನಿನ್ನ ಐಶ್ವರ್ಯವ ಕ್ಷಣದಲ್ಲಿ। ನಾಶಮಾಡುವೆನೆಂದನಾಗ॥28॥ ಅಮೃತದ ಕಲಶವ ಕನ್ನೆ ಕೈಯಲ್ಲಿ ಕೊಟ್ಟು। ಚಮತ್ಕಾರದಲಿ ಮಾಯವಾದ। ಹೊಟ್ಟೆ ಹಸೀತು ಭೋಜನ ಮಾಡೆನೆಂದರೆ। ಅಟ್ಟ ಅಡಿಗೆ ಒಳಗಿಲ್ಲ॥29॥ ಕುಟ್ಟಿದ ಭತ್ತವು ಮನೆಯೊಳಗೇ ಇಲ್ಲ। ಇನ್ನೇನೆನುತ ಚಿಂತಿಸಿದಾ। ಸಣ್ಣವಾದ ಅಕ್ಕಿ ಬೇಳೆ ಬೆಲ್ಲಗಳೆಲ್ಲ। ಮಣ್ಣುಗೂಡೋಯಿತಾಕ್ಷಣದಿ॥30॥ ಎಣ್ಣೆ ತುಪ್ಪದ ಕೊಡ ಎಲ್ಲಾ ಉರುಳೋಯಿತು। ಇನ್ನೇನೆನುತ ಚಿಂತಿಸಿದಾ। ಹತ್ತುವ ತೇಜಿ ಸುಪ್ಪತ್ತಿಗೆ ಹೋಯಿತು। ಲಕ್ಷುಮಿದೇವಿ ತೊಲಗಿದಳು॥31॥ ಲಕ್ಷಾಧಿಕಾರವು ವ್ಯರ್ಥಾಗಿಹೋಯಿತು। ಇನ್ನೇನೆನುತ ಚಿಂತಿಸಿದಾ।ಉಡುವಂಥದುಕೂಲ ವಸ್ತ್ರಂಗಳೆಲ್ಲವು। ಪುಡಿಪುಡಿಯಾಗಿ ಹರೆದವು॥32॥ ಎಡಗೆಯ್ಯಲಿ ತನ್ನ ಮಡದಿಯ ಹಿಡಕೊಂಡ। ನಡೆದನೆ ದೇಸಿಗನಂತೆ। ಮದಗಜಗಮನೆ ಮೆಲ್ಲಡಿಗಲನಿಡುತಲಿ। ಕಂದಿತಿಬ್ಬರ ನಗೆಮುಖವು॥33॥ ಕಂದರ್ಪನಯ್ಯನು ಬರುವೊ ಮಾರ್ಗದಲಿ। ಒಂದು ಹೊಲವ ನಿರ್ಮಿಸಿದಾ। ಪಲ್ಲೈಸಿದ ಪೈರನೆ ಕಂಡು ಮನ್ಮಥ। ಮೆಲ್ಲನೆ ಕೈದುಡಿಕಿದನು॥34॥ ನಿಲ್ಲೆಲೊ ನಮ್ಮ ಹೊಲವ ಹೊಗದಿರಲೆಂದು। ಅಲ್ಲಿಂದ ಘರ್ಜಿಸಿ ನುಡಿದಾ। ತಪ್ಪದೆ ಕಣಿವೆ ಕಲ್ಲಿಟ್ಟು ಮದನನಿಗೆ। ನಿಮ್ಮಪ್ಪನ್ಹೊಲವೆ

ಹೇಳಿನಲು।।35।। ದರ್ಪದಿಂದಲಿ ಶಂಕರಗಂಡ ಘರ್ಜಿಸೆ। ಸೊಪ್ಪಿನ ಮರೆಗೆ ಅಡಗಿದನು। ಮೊಸರು ಯಾಲಕ್ಕಿ ಶುಂಠಿನ್ಹಾಕಿ ನಾರೇರು। ಹಸನಾಗಿ ಕುಟ್ಟಿಬುತ್ತಿಯನು।।36।। ಹೊಸಗೂಡೆಯಲಿ ಕೊಂಡು ಬರುತಿರೆ ಪರಿಮಳ। ಯೆಸೆವೋದ ಕಂಡು ಮನ್ಮಥನು। ತರುಣೆರನ್ನಳೆ ಪೋಗಿ ತವಕದಿಂಬುತ್ತಿಯ। ತಿರಿದು ತಾರೆನುತ ಹೇಳಿದನು।।37।। ತರವೆ ಎನಗೆ ಚಿಕ್ಕ ಪ್ರಾಯ ಎನುತಲಬ್ಬೆ। ತಿರಿದು ತಾರೆನುತ ಹೇಳಿದನು। ರಮಣನ ಮಾತು ಮೀರಬಾರದೆನುತಾಲಿ। ಅವರುಂಬೊ ಸಮಯಕ್ಕೆ ಪೋಗಿ।।37।। ನಮಗೆ ತುತ್ತನ್ನವ ಕೊಡು ತಾಯೆ ಎನುತಲಿ। ಕಮಲಾಕ್ಷಿ ಕೇಳಿದಳಾಗ। ಉಂಬುವ ಸಮಯಕ್ಕೆ ಬಂದಳೆನ್ನುತ ಕೊಟ್ಟರು। ಲಿಂಬೆಯ ಹಣ್ಣು ಬುತ್ತಿಯನು।।38।। ಸಂಬಾರದಿಂದಲಿ ಸವಿದುಂಡು ಸಾಲದೆ। ಹಂಬಲಿಸುತ್ತ ಬರುತ್ತಿದ್ದಾ।ಬಾರೆಲೊ ಎನುತಾಲಿ ಕರಸಿ ತಾನ್ನುಯಿಸಿದ। ಆಗಲಂಬಲಿ ಮೂರು ಬೊಗಸೆ।।।39।। ಯಾರ ಮಗನೊ ನೀನು ಹೆಸರೇ ನೆನುತಲಿ। ವಿಚಾರಿಸಿದನು ಮನ್ಮಥಗೇ। ನೆರೆಹೊರೆಯವರು ಕಾಮುಕನೆಂದು ಕರೆವೋರು। ಪರದೇಶಿ ಎನುತ ತಾ ನುಡಿಯೆ।।40।। ಕರುವ ಕಾಯ್ವರೆ ಮೂರು ಬೊಗಸೆ ಅಂಬಲಿಯನ್ನು। ಮರೆಯದೆ ಹೋಯ್ಯಿಸುವೆನೆಂದಾ। ತಂದೆ ನೀನಿಟ್ಟ ಊಳಿಗದಲ್ಲಿರುವೆನು। ಹಾಗೆಂದು ಹೇಳಿದನು ಮನ್ಮಥನು।।41।। ನಾಲ್ಕುರು ದಿವಸ ಕರುಗಳಿಂಡನೆ ಕಾಯ್ದು। ಹಾಗೆಂದು ಹೇಳಿದನು ಮನ್ಮಥನು। ಯಾಕೆಲೊ ಕರುಗಳು ಬಡವಾದವೆನುತಲಿ। ದಿಕ್ಕರಿಸಿದನು ಮನ್ಮಥಗೇ।।43।। ಕಡಿಮೆಮಾಡಿರಿ ಒಂದು ಬೊಗಸೆ ಅಂಬಲಿಯನ್ನು। ಒಡಲಿಗೆ ಸಾಲದಂಗದಗೆ। ಎಡಬಲಗೈಯಿಂದ ಹುಲ್ಲನೆ ಕೊಯ್ದುನು। ಎನ್ನೊಡೆಯ ಮೆಚ್ಚುವನು ಎಂದೆನುತಾ।।44।। ಪಾಳಿ ಒಡೆದು ರಕ್ತಧಾರೆ ನೀಡುತಲಿರೆ ಹುಲ್ಲು। ಹೊರೆಯ ಹೊತ್ತನು ಮಸ್ತಕದೀ। ಕರುಗಳ್ಹಿಂಡು ಮುಂದೊಪ್ಪಿ ಮನ್ಮಥರಾಯ। ಬರುವೋದ ಕಂಡು ಭಾಮಕಿಯು।।45।। ತನ್ನ ವಲ್ಲಭನ ಶ್ರಮವ ನೋಡಿ ರತಿದೇವಿ। ಕಣ್ಣಲಿ ಉದಕ ತುಂಬಿದಳು। ಇನ್ನಾದರು ಸಲಹೆಂದು ಅಣ್ಣಗೆ ಬೇಡಿ।ಕೊಂಡು ಬಿನ್ನೈಸಿದಳಾಗ।।46।। ಪಾಳಿ ಒಡೆದು ರಕ್ತಧಾರೆ ನೀಡುತಲೀರೆ। ಗಾಯವ ಕಂಡು ಅಂಗದನಾ। ಹೋಯಿತು ಮನದ ಕ್ಲೇಶವು ಅಂತಃಕರಣವು। ಆಯಿತಂಗದನ ಮೇಲೊಲಿದು।।47।। ಕಬ್ಬು ಬೇವಿನ ಕೃಪೆಯಿಂದತಿ ವೃತ್ತಿಯಿಂ ಅಭ್ಯಂಗನವ ಮಾಡಿಸಿದಾ।। ಶುಭ್ರವಸ್ತ್ರವ ಉಡಕೊಟ್ಟು ಮನ್ಮಥಗೇ ನಿರ್ಭಂದವ ಬಿಡಿಸಿದನು।।48।। ಭಾವಮೈದುನತನದಿಂದ ನೋಡಿದರೆ। ವಿವೇಕವು ಸಾಲದಂಗದಗೆ। ಎಡಬಲದಲಿ ಠಾಣ ದೀವಿಗೆಯನು ಹಚ್ಚಿ। ಎಡೆ ಮಾಡಿ ಚಪ್ಪರದಲ್ಲಿ। ಒಡನೆ ಪಾಯಸ ಪಂಚಭಕ್ಷ ಪರಮಾನ್ನವು। ಹಿಡಿದಿದ್ದ ವೀಳ್ಯೇ ಮೈದುನಗೇ।।49।। ಪಟ್ಟಾವಳಿ ಸೀರೆ ಮಿತ್ರೆಗುಡುಗರೆಕೊಟ್ಟು। ಮುತ್ತನೆ ಸೋಗಿಲ ತುಂಬಿ। ಚಿತ್ತಜ ಸಹಿತಾಗಿ ಮುತ್ತಿನಂದಣವೇರಿ। ರತಿದೇವಿ ತಾನ್ಹರುಷದಲಿ।।50।। ಸಾರಾವಳಿ ಸೀರೆ ನಾರಿಗುಡುಗರೆ ಕೊಟ್ಟು। ಬೇಗನೆ ಸೋಗಿಲ ತುಂಬಿ। ವಾರಿಜ ಸಹಿತಾಗಿ ರತ್ನದಂದಣವೇರಿ। ರತಿದೇವಿ ತಾನ್ಹರುಷದಲಿ।।51।। ಮಂಗಳ ಜಯವೆನ್ನಿ ಮಂಗಳ ದಿನವೆನ್ನಿ। ಮಂಗಳಾಂಗಿ ಮಹಾಲಕ್ಷ್ಮಿ। ಕಂಗಾಳು ತೆಗೆದು ಕಟಾಕ್ಷದಿ ನೋಡಿದರೆ। ಇಂಗೊದು ಸಕಲ ಪಾಪಗಳು।।52।।ಬರಡು ಕರೆಯಲಿ ಬಂಜೆಗೆ ಮಕ್ಕಳಾಗಲಿ। ಕುರುಡಾಗೆ ಕಂಗಾಳು ಬರಲಿ। ರುಣ ಹರಿಯಲಿ ದಾರಿದ್ರವು ತೊಲಗಲಿ। ಶ್ರೀಹರಿ ನಮ್ಮ ಹೃದಯದಲ್ಲಿರಲಿ।।53।।

## ಪಂಕಜನಾಭಗೆ ಶಂಕಿಸಿ ಶರಣೆಂಬೆ (ಜ್ಯೇಷ್ಠದೇವಿ ದಾರಕಟ್ಟಿಕೊಳ್ಳುವ ಹಾಡು)

ಪಂಕಜನಾಭಗೆ ಶಂಕಿಸಿ ಶರಣೆಂಬೆ ಪಂಕಜೋದ್ಭವಗೆ ಶರಣೆಂದು ಪೇಳುವೆ ಅಂಬಿಕೆಗೆ ಕರವ ಮುಗಿವೆನು।। ಹಿರಿಯ ಹೆಂಡತಿ ವೈದು ಮುಳ್ಳು ಬೇಲಿಯಲಿಟ್ಟು ಸಿರಿವೈದು ಕೊಟ್ಟು ಶ್ರೀಕಾಂತೆಂಬ ಅರಸಿಯಮನೆಯೊಳಗಿರುತ್ತಿದ್ದ ಅರಸು।। ಹೊರಟನೆ ರಾಯ ತಾ ಮೃಗದ ಬೇಟೇನಾಡಿ ಕೆರೆ ಇಲ್ಲ ಭಾವಿ ಮೊದಲಿಲ್ಲ। ಕೆರೆಯಿಲ್ಲ ಭಾವಿ ಮೊದಲಿಲ್ಲದಿದ್ದರೆ ಬಿಡುವೆ ನಾ ಪ್ರಾಣಗಳನೆಂದ।। ಹೋಗುವ ದೂತನ ಬೇಗದಲಿ ಕರೆದರು। ಕರದಲ್ಲಿ ದಾರಕಟ್ಟಿ ಕೂಗಣಿ ಕುರುಳಿಯಲಿ ಉದಕ ಕೊಡುವೋರು।। ಹಿಂದಕ್ಕೆ ತಿರಿಗಿ ನೀ ನೋಡಬೇಡ। ಎನುತಲಿ। ಹಿಂದಕ್ಕೆ ತಿರುಗೆ ಬಿಸಲಿಗೆ ಕೂಗಣಿ। ಒಡೆದು ನದಿಯಾಗಿ ಹರಿದೀತು।। ನದಿಯ ನೀರನೆ ಕುಡಿದು ಕರೆದನು ದೂತನ್ನ। ಕರದಲ್ಲಿ ನೀನು ಕಟ್ಟಿದ್ದ। ಧಾರದ ಮಹಿಮೆಗಳೆನಗೆ ತಿಳಿದೀತು।। ದೃಷ್ಟಿಸಿ ಕಾಂತೆ ತಾ ಸಿಟ್ಟಲಿ ಹರಿದಳು ಹಿತ್ತಲಾಗಿದ್ದ ಪಡವಲ। ಬಳ್ಳಿಯ ಹಂದರದ ಮೇಲೆ

ಎಸೆದಾಳು।।10।। ಒಣಗಿದ್ದ ಬಳ್ಳಿಯು ಚಿಗತು ಫಲವಾಯಿತು. ಅದು ಕಂಡು ರಾಯ ಮನದಲಿ। ಕ್ಲೇಶ ಪಡುತ್ತಿದ್ದ।। ದಿನದ ಪಡಿಗಳಿಗಾಗಿ ಬಂದಳಾ ದಾಸಿಯು ಪಡುವಲ ಬಳ್ಳಿಯ ಮೇಲಿದ್ದ। ಧಾರವನು ಕಂಡು ಸಂತೋಷ ಪಡುತಿದ್ದು।। ಕೈಯಲ್ಲಿ ಮುಟ್ಟಿದರೆ ಕಳ್ಳಿ ಎಂದಾರೆಂದು ಕಾಲಲ್ಲಿ ಮುಟ್ಟಿದೇ ಲಕ್ಷ್ಮೀ ಧಾರವೆಂದು ಮರದ ಕೊನೆಯಲ್ಲಿ ತೆಗೆದಾಳು।। ತೆಗೆದು ಧಾರವನು ಉಡಿಯೊಳಗಿಟ್ಟಳು ದಿನದ ಪಡಿಗಳನು ಕೇಳಿದರೆ। ಚಾರಕರು ರಾಗಿ ಪಡಿತಂದು ಕೊಡುವೋರು।। ರಾಗಿ ಪಡಿ ಕೊಡುವೋದು ರಾಯ ತಾ ನೋಡಿದ ನನಗಲ್ಲದರಸಿ ನಿಮಗಲ್ಲ। ಎಂದೆನುತ ರಾಯ ಕೋಪದಲಿ ನುಡಿದಾನು।। ತರಿಸಿದರಾಯ ತಾ ಅಕ್ಕಿ ಗೋದಿ ಬೆಲ್ಲ ತರಿಸಿ ತುಂಬಿಸೀ ದಾಸೀಗೆ। ಮನಿತನಕಾ ಕಳಿಸೀದ।। ಒಕ್ಕಲಗಿತ್ತಿಯು ಹೊತ್ತಳು ಹೆಡಗಿಯನ್ನು ಮಿತ್ರೆ ಸುಕಾಂತೆ ಮನೆಗಾಗಿ। ಇಳಿಸವ್ವ ಭತ್ತದ ಹೆಡಗಿಯನು।। ಅಂದ ಮಾತಿಗಾಕಿ ನೊಂದಾಗ ಮನದಲ್ಲಿ ಮಂದಿಯವಳಗೆ ನೆಗೆಗೇಡು। ಮಾಡುವುದು ದಾಸಿ ನಿನಗಿದು ತರವೇನೆ।। ಚಿಕ್ಕಂದವಲ್ಲವೇ ತಾಯೇ ನೀ ಕೇಳವ್ವ ಒಡೆಯರು ಕೊಟ್ಟಂಥ ಪಡಿಗಳನು। ನೋಡೆಂದು ಅಕ್ಕಿ ಗೋದಿಯನೆ ತೆಗೆದಾಳು।। ತೆಗೆದು ಧಾರವನು ಹರದಿಗೆ ಕೊಟ್ಟಳು। ಮಿತ್ರೆ ಸುಕಾಂತೆ ಧಾರದ ತೊಡಕನ್ನು ಬಲ್ಲ ಹಿರಿಯರಿಗೆ ಅರುಹಿದಳು।।20।। ಭಾದ್ರಪದ ಶುದ್ಧ ಅಷ್ಟಮಿಯದಿನದಲ್ಲಿ ಮುತ್ತೈದೆ ನನಗೆ ದೊರಕ್ಯಾಳು। ಇಂದಿನ ಸೌಭಾಗ್ಯವೆಂದು ನುಡಿದಾಳು।। ಅರಸಿನ ಮನೆಗಾಗಿ ಬಂದಳೆ ಮಹಲಕ್ಷ್ಮೀ ವೃದ್ಧ ಮುತ್ತೈದೆ ರೂಪವನೆ। ತಕ್ಕೊಂಡು ಶ್ರೀಕಾಂತೆಯ ಬಳಿಗೆ ನಡೆತಂದ್ಲು।। ಮಾಸಿದ್ದು ಉಟ್ಟಿದ್ದು ಮೈಲಿಗೆ ತೊಟ್ಟಿದ್ದು। ಸೂಸುವ ಮಾರೀ ಸಿಂಬಳದ। ಜೋರಿನ್ನು। ಹೇಸಿ ಹೋಗೆಂದು ನುಡಿದಳು।। ಅಂದ ಮಾತಿಗಾಗಿ ಕೊಡುವಳೆ ಶಾಪವ ಹಂದಿಯ ಮಾರಿ ಮಂದಿಯ। ರೂಪವು ಇಂದು ನಿನಭಂಗ ದೃಢವಾಗಲಿ।। ನುಡಿದ ಮಾತಿಗಾಗಿ ಕೊಡುವಳೆವಿ ಶಾಪವ ಮಿತ್ರೆ ಸುಕಾಂತೆ ಮಿಂದ। ಆ ನೀರೊಳು ಅಂದು ನನಭಂಗ ದೃಢವಾಗ್ಲಿ।। ಹಿರಿಯ ಹೆಂಡತಿ ಮನೆಗೆ ಬಂದಳಾ ಮಹಲಕ್ಷ್ಮೀ ವೃದ್ಧ ಮುತ್ತೈದೆ ರೂಪವನೆ। ತಕ್ಕೊಂಡು ಸುಕಾಂತಿದ್ದ ಬಳಿಗೆ ನಡತಂದ್ಲು।। ಹರಸಿ ಮುತ್ತೈದೆಗೆ ಮುದದಿಂದ ಎರದಳು ಹದಿನಾರು ಎಳೆಯ ಧಾರವನು। ಗಂಟುಹಾಕಿ ಮುದದಿಂದ ಆರತಿಯ ಬೆಳಗಿದಳು।। ಮರುದಿನ ಅಷ್ಟಮಿಯಲ್ಲಿ ಮೂಲ ನಕ್ಷತ್ರದಲ್ಲಿ ಒಡನೆ ಮಿಕ್ಕಂಥ ಅಷ್ಟಮಿಯ ಶೇಷವನು। ಒಡನೆ ಮಹಾಲಕ್ಷ್ಮೀ ಉಣುತಿದ್ದು।। ಭೋಗುಳ್ಳ ಅರಸುತನ ರಾಜ್ಯವನೆ ಕಳಕೊಂಡು ಪಾದಚಾರಿಯಾಗಿ ಪರಮ। ಕಷ್ಟದಿಂದ ಭೂಮಿಯಲಿ ಕೃತಘ್ನಗೆ ನೆರಳಿಲ್ಲ।। ಭೂಮಂಡಲೇಶನಾದ ಗಂಡನ ಕಾಣದೆ ಬೆಂಡಾಗಿ ರಾಯ ಬಳಲುತ್ತಿಪ್ಪುದು ಕಂಡು ತಂಗಿಗೆ ವಿಶಾಪ ಕೊಟ್ಟಳು।।30।। ಅಣ್ಣಿಗೇರಿಯಲ್ಲಿ ಅಮೃತ ಭೂಮಿಯಲ್ಲಿ ಲಕ್ಷ್ಮೀದೇವಿ ಕಥೆಯ ಮಾಡಿದನು। ಮಾಡಿದನು ತಿರುಮಲ ಲಕ್ಷಣವುಳ್ಳವು ಕಿವಿಯೊಡ್ಡಿ ಕೇಳೆ ಹರಿ ಒಲಿವ।।



## 40. ಅನಂತ ಪದ್ಮನಾಭವ್ರತ

**ಶ್ರೀ ಗುರು ಗಣಪತಿಯನ್ನು ಮನದೊಳು (ಉದಯ ರಾಗ)** **ರಾಗ: ಭೌಳಿ**

ಶ್ರೀ ಗುರು ಗಣಪತಿಯನ್ನು ಮನದೊಳು ಪ್ರಾರ್ಥಿಸಿ ಸ್ಮರಿಸಿ ಪೇಳುವೆನು। ಮನದಲ್ಲಿ ಸ್ವಾಮಿಯನು ಹರುಷದಿ ಉದಯದಲಿ ನೆನೆವೆನು।।1।। ನಮೋ ಎಂಬೆ ಶ್ರೀ ಹರಿಗೆ ನಮೋ ಎಂಬೆ ದೇವಕಿ ಸುತಗೆ। ನಮೋ ಎಂಬೆ ರುಕುಮ್ಮಿಣಿ ಅರಸಗೆ। ಅರಸ ಶ್ರೀ ಸ್ವಾಮಿಯನು ಹರುಷದಿ ಉದಯದಲಿ ನೆನೆವೆನು।।2।। ತಾವರೆ ಹೂವನು ಭಾವದಿ ಕೊಯ್ತಂದು। ದೇವ ಶ್ರೀ ಹರಿಯ ಚರಣಕ್ಕೆ ಅರ್ಪಿಸಿ ಹರುಷದಿ ಉದಯದಲಿ। ಸಿಂಗಾರದ ಹೂವು ಕೊಯ್ದು ಶೃಂಗಾರದಿ ಅರ್ಪಿಸಿ ನೆನೆವೆನು।।3।। ತಿಂಗಳು ಕಂತಿ ಉದಯವಾಗಲು। ಸೂರ್ಯನಾರಾಯಣನ ಹರುಷದಿ ಉದಯದಲಿ ನೆನೆವೆನು।।4।। ಸುರಗಿ ತಾವರೆ ಜಾಜಿ ವರಸಂಪಗೆ ಮಲ್ಲಿಗೆಯ ಪರಿಮಳದ ಕುಸುಮವ ಕುಸುಮವ ಕೊಯ್ತಂದು ಅರ್ಪಿಸಿ ಉದಯದಲಿ ನೆನೆವೆನು।।5।। ಮುತ್ತಿನ ಮಂಚದ ಮೇಲೆ ರತ್ನದ ಹಾಸಿಗೆಯ ಮತ್ತೆ ರುಕ್ಮಿಣಿಯಾ ಒಡಗೊಂಡು ಒಡಗೊಂಡು ಒರಗುವ ಶ್ರೀಹರಿಯ ಉದಯದಲಿ ನೆನೆವೆನು।।6।। ಪೂರ್ವಬಾಗಿಲ ಮುಂದೆ ಸೇವೆಯಲಿ ಗಿಳಿಗಳು ಸೂರ್ಯದೇವನಿಗೆ ಸ್ವರಗೈದು ಸ್ವರಗೈದು ನಾರಿಯರೆಲ್ಲರು ಕೊಂಡಾಡುವ ಹರಿಯ ಉದಯದಲಿ ನೆನೆವೆ।।7।।

**ಹಣ್ಣು ತೆಂಗಿನಕಾಯ್ಗೆ** **ರಾಗ: ಆನಂದಭೈರವಿ**

ಹಣ್ಣು ತೆಂಗಿನಕಾಯ್ಗೆ ಅಚ್ಚದರಿಶಿನಹಚ್ಚಿ। ಸಣ್ಣ ಕುಂಕುಮವಿಟ್ಟು ಚಿನ್ನದ ಕಳಶವಿರಿಸಿ।। ಧ್ಯಾನಾವಾಹನಯಿಂದ ಮೌನವಾಙ್ಮಯೆ ಮಾಡಿ। ಮಾನಸ ದೃಢಕಿರಣ ಜ್ಞಾನಭಕುತಿ ಕ್ರಮದಿ। ಚೂತಪತ್ರವನಿರಿಸಿ ನೂತನವಸ್ತ್ರವಿರಿಸಿ। ದರ್ಭೆರೂಪದಪವಿತ್ರ ಸಮರ್ಪಿಸಿ।। ಹಣದರಾಶಿಯ ತಂದಿರಿಸಿ ದರ್ಭೆಯ ಜಡೆಮಾಡಿ। ಮಣಿಮಯ ಕಳಶವಿರಿಸಿ ಗಣಪತಿಯ ಸ್ಥಾಪಿಸಿ ನರದೃಢಸೂತ್ರವನು ಎರಡೇಳು ಗಂಟ್ಹಾಕಿ। ಹರಿಯಮುಂದೆ ಸ್ಥಾಪಿಸಿ ಹರುಷದಿ ಪೂಜಿಸಿ।। ಪರಿಪರಿ ಫಲಪುಷ್ಪ ಪರಮಾನ್ನ ಗುಡಶಾಕ। ಸುರಭಿದಧಿಕೃತ ಹರಿಗೆ ಸಮರ್ಪಿಸುತ್ತಾ। ಅಂಗನೆ ಸಹಿತಾ ವರಮಂತ್ರ ವಿಭವದಿಂದಾ। ಕರದಿದಾರವಧರಿಸಿ ಹರಿಗೆ ನಮಸ್ಕರಿಸಿ।। ರತಿಗಳಾಗಿರುವ ದಂಪತಿಗಳ ಪೂಜಿಸಿ। ಹಿತದಿಭೋಜನಗೈಸಿ ಬಾಗಿನವಿತ್ತು। ಪಕ್ಷಿವಾಹನ ಸಿರಿಯ ಅಕ್ಷಯ ಕೊಡಲೆಂದು। ಆ ಕ್ಷಣ ಭಕ್ತರು ಅಕ್ಷತೆ ಪುಷ್ಪಗಳನ್ನರ್ಪಿಸಿ।। ಕರ್ಪೂರದಾರತಿಯ ಸರ್ಪಶಯನನಿಗೆತ್ತಿ। ಮಂತ್ರಪುಷ್ಪವನರ್ಪಿಸಿ ಭಕ್ತಿಯಿಂದ। ಇತ್ತು ತಾಂಬೂಲವನು ಸುತ್ತ ದೀಪಗಳ್ಹಚ್ಚಿ। ಎತ್ತಿ ಮಂಗಳಾರತಿಯ ಸುಮಿತ್ರೆಯರು ಪಾಡಲು।। ಇಂಥ ವ್ರತವ ಮಾಡಿ ಕಾಂತೆ ಸುರರು ಕೂಡಿ। ಕಂತುಪಿತನ ದಯದಿ ಶಾಂತನಿದ್ದನು ಸ್ಥಿರದಿ।।

**ವ್ರತವನೂ ಮಾಡಿದರು** **ರಾಗ: ಸಾರಂಗ**

ವ್ರತವನೂ ಮಾಡಿದರು। ಮತಿವಂತರೂ ವ್ರತವನೂ ಮಾಡಿದರು।।ಪ।। ದಂಪತಿಗಳು ಕೂಡಿ ಹಿತದಿ। ಪತಿತ ಪಾವನ ಶ್ರೀಪತಿ ಪದ್ಮನಾಭನ।।ಅ.ಪ।। ವರ ಭಾದ್ರಪದ ಮಾಸ। ಬರಲು ಚತುರ್ದಶಿ। ಧರಣಿ ಸುತರಾ ಕರೆಸಿ ಪರಿಪರಿವಿಧಗಳಿಂದಾ।।1।। ಕದಳಿ ತೋರಣದಿಂದ ಸದನವ ಶೃಂಗರಿಸಿ। ಸದಮಲಾ ಮನೆಯ ಮುದದಿ ಪೂಜಿಸುವಂತ।।2।। ಅಂಗನೆ ಸುಶೀಲೆ ಸಹಿತ। ಗಂಗೆಯೊಳಗೆ ಮಿಂದು। ಶೃಂಗರಿಸಿ ಮಂಟಪವಾ ಮಂಗಳವ ಪಾಡುತ್ತಾ।।3।। ಹಣ್ಣು ತೆಂಗಿನಕಾಯಿ। ಬಣ್ಣವುಳ್ಳರಿಸಿನ ಹಚ್ಚಿ। ಸಣ್ಣ ಕುಂಕುಮವಿಟ್ಟು। ಚಿನ್ನದ ಕಲಶಕ್ಕಿರಿಸಿ ।।4।। ಪಣದ ಕಲಶವ ತರಿಸಿ। ಎಣಿಸಿ ಏಳ್ ಹೆಡೆಯ ಮಾಡಿ। ಗಣಪತಿಯ ಸ್ಥಾಪಿಸಿ। ಹರಿಗೆ ನಮಸ್ಕರಿಸಿ ।।5।। ಕರ್ಪೂರದಾರುತಿಯನು। ಸರ್ಪಶಯನನಿಗೆ ಎತ್ತಿ। ವಿಪ್ರರು ಮಂತ್ರಪುಷ್ಪ। ಅಕ್ಷತೆಗಳ ನರ್ಪಿಸಿ।।6।। ಮುನ್ನ ತಾ ನೋಡಿದ। ಚಿನ್ಮಯ ಮೂರ್ತಿಯನು। ಸನ್ನಿಧಾನವ ಬೇಡಿ। ಮುದದಿ ಪೂಜಿಸುವಂತ।।7।। ವ್ರತವನು ಮಾಡಿದರು। ದಂಪತಿಗಳು ಕೂಡಿ। ಹಿತದಿ ಭೋಜನ ಗೈಸಿ। ಮುದದಿ ಬಾಗಿನವಿಟ್ಟು।।8।।

**ಬಾರೋ ಬಾ ಮಂಟಪಕೆ ವರಪದ್ಮನಾಭನೆ** **ರಾಗ:ಹಿಂದೋಳ**

ಬಾರೋ ಬಾ ಮಂಟಪಕೆ ವರಪದ್ಮನಾಭನೆ। ತೋರೋ ಮನಕೆ ಮುದವಾ ಗೋಪಾಲಕೃಷ್ಣನೇ।।ಪ।। ಕಿರೀಟವು ಹೊಳೆಯುತಾ ಕರ್ಣದಿ ಕುಂಡಲಾ। ಕೊರಳೊಳು ವೈಜಯಂತೀ ಮಾಲೇ ಪ್ರಜ್ವಲಿಸುತಾ। ಕರದಲಿ ಶಂಖ ಚಕ್ರ ಪಿಡಿದು ನೀ ಬೇಗನೆ।।1।। ಮರುಗ ಮಲ್ಲಿಗೆ ಜಾಜಿ ಸುರಗಿ ಶಾವಂತಿಗೆ। ಕಮಲ ಪುಷ್ಪವ ತಂದು। ಹರಿಗೆ ನಾನರ್ಪಿಸುವೆ। ಗರುಡ ಗಮನನೇ ಕರುಣದಿಂ ಬೇಗನೆ।।2।। ಶ್ರೀಶಪಾಲಕನೇ ಶ್ರೀಲಕ್ಷ್ಮೀನಾರಾಯಣನೇ। ಭಕ್ತರ ಪೊರೆಯುವೋ ಮುಕ್ತಿಪ್ರದಾಯಕನೇ। ತಕ್ಷಣದ್ರೌಪದಿಗೆ ಅಕ್ಷಯವಿತ್ತೆಯೋ।।3।।

**ಅನಂತ ರೂಪನೆ ಅನಂತ ನಾಮನೆ** **ರಾಗ:ಮಾಂಡ್-ಏಕತಾಳ**

ಅನಂತ ರೂಪನೆ। ಅನಂತ ನಾಮನೆ। ಅನಂತ ಶಯನನೆ। ನಮೋ ನಮೋ।। ಅನಂತ ಸದ್ಗುಣ ನಿಲಯನೆ। ಅನಂತ ಪದ್ಮನಾಭನೆ। ನಮೋ ನಮೋ।।ಪ।। ಸರ್ವನೆ ಸರ್ವನೆ। ಶಿವನೆ ಸ್ಥಾಣುವೆ। ಶಂಭು ಸ್ವಯಂಭುವೆ। ನಮೋ ನಮೋ।। ಸರ್ವೇಶ್ವರ ಶಾಶ್ವತ ನಿಜರುದ್ರನೆ। ಅಮೃತ ಸಿದ್ಧನೆ। ನಮೋ ನಮೋ।।1।। ಲೋಕಾನೇಕವ। ಬೇಕೆನಿಸಿದಾಗ। ಸೃಷ್ಟಿಸ್ಥಿತಿಲಯ ಗೈಯ್ಯುವನೆ।। ಏಕಾನೇಕನೆ। ಶ್ರೀಕರಾಚ್ಯುತನೆ। ಲೋಕಾಧ್ಯಕ್ಷನೆ। ನಮೋ ನಮೋ।।2।। ತ್ರಿಜಗದೊಡೆಯನೆ ಅಜಭವನುತನೆ। ಅಪ್ರಮೇಯನೆ ನಮೋ ನಮೋ। ವಿಜಯ ಸಾರಥಿಯೆ। ವಿಶ್ವವಿನೋದಿಯೆ।

ವಿಶ್ವೇಶ್ವರನೆ ನಮೋ ನಮೋ॥3॥ ನಿನ್ನ ಪೊಗಳಲಾ ಪನ್ನಗಾದಿಗರಿಗಾಗದು। ನನ್ನೊಳು ನುಡಿಸಿಹ ರಘುವರನೆ। ನಿನ್ನದೆ ಕೃಪೆಯು ಎನ್ನದೇನಿಹುದೋ। ಧನ್ಯನ ಮಾಡೆನ್ನ ಶುಭಕರನೆ॥4॥

**ಜನ್ಮ ಸಾಫಲ್ಯವಾಯಿತು ಜನಾರ್ಧನ ರಾಗ: ಕನ್ನಡ-ಆದಿತಾಳ**

ಜನ್ಮ ಸಾಫಲ್ಯವಾಯಿತು ಜನಾರ್ಧನ। ಅನಂತ ಪದ್ಮನಾಭನಾ ಕಂಡು॥ಪ॥ ಮೊದಲನೆ ಬಾಗಿಲಲ್ಲಿ ನಿಮ್ಮ ಮುದ್ದು ಮುಖವನೆ ಕಂಡೆ। ಮುದದಿಂದ ಮುಕುಟ ಮಯೂರ ಕುಂಡಲ ಕಂಡೆ॥ ಭುಜ ದ್ವಯರುಗಳ ಕಂಡೆ। ಶ್ರೀವತ್ಸ ಕೌಸ್ತುಭ ಕಂಡೆ॥ ಕೊರಳಲಿ ವೈಜಯಂತಿ ಮಾಲೆಯ ಕಂಡೆ॥1॥ ಎರಡನೆ ಬಾಗಿಲಲ್ಲಿ ನಿಮ್ಮ ನಾಭೀ ಕಮಲವ ಕಂಡೆ। ಉಡಿಯಲ್ಲಿ ಮೇಲಾದ ಹೊಳೆವ ಪೀತಾಂಬರ। ನಡುವಿನೊಳೊಡ್ಯಾಣವ ಹೊಳೆವ ಕಾಂಚಿಯ ಧಾಮ। ಕಿರುಗೆಜ್ಜೆಯು ತಾ ನಲಿವುದ ನಾ ಕಂಡೆ॥2॥ ಮೂರನೇ ಬಾಗಿಲಲ್ಲಿ ನಿಮ್ಮ ಮುದ್ದು ಚರಣವ ಕಂಡೆ। ಶ್ರೀದೇವಿ ಭೂದೇವಿ ಸೇವೆ ಮಾಳ್ಪುದ ಕಂಡೆ। ಸುರರು ಮಾನವರೆಲ್ಲಾ ಸ್ತೋತ್ರ ಮಾಳ್ಪುದ ಕಂಡೆ। ಉರಗಶಯನ ಪದ್ಮನಾಭನ ಕಂಡೆ॥3॥

**ಪನ್ನಗ ಶಯನ ಪದ್ಮನಾಭ ರಾಗ: ಮಧ್ಯಮಾವತಿ-ಆದಿತಾಳ**

ಪನ್ನಗ ಶಯನ ಪದ್ಮನಾಭ। ಪರಿಪಾಲಯಮಾಂ ಪಂಕಜನಾಭಾ॥ಪ॥ ಉನ್ನತ ಪಾಂಡ್ಯ ಕೇರಳನಿವಾಸ। ಶ್ರೀನಿವಾಸ ಚಿದಾನಂದ ವಿಲಾಸ॥ಅ.ಪ॥ ಪಾಯಸಾನ್ನ ಪ್ರಿಯಕರಾ ಶ್ರೀಕರಾ। ಪರಶುರಾಮ ಕ್ಷೇತ್ರ ಪ್ರಭಾಕರಾ। ಪರಮಭಕ್ತ ಪ್ರಹ್ಲಾದಾದಿವಿನುತ॥ ಪ್ರಸಿದ್ಧ ಗುರುಗುಹತೋಪಚಾರ। ಮಾಯಾತೀತ ಮಂದರ ಗಿರಿಧರ ಕರಧೃತ ಶಂಕಚಕ್ರ ಗಧಾತೀತ। ವಾರಿಜಾಸನಾದಿ ಸಂಸೇವಿತ। ದಾಮೋದರ ದಯಾಕರ ವರದಹರ॥ಚರಣ॥

**ಪನ್ನಗಶಯನ ಶ್ರೀ ಅನಂತಪದ್ಮನಾಭ ರಾಗ: ವಸಂತ**

ಪನ್ನಗಶಯನ ಶ್ರೀ ಅನಂತಪದ್ಮನಾಭ॥ಪ॥ ಚಿನ್ಮಯರೂಪ ದಯಮಾಡೊ ರುಕ್ಮಿಣಿ ವಲ್ಲಭ॥ಅ.ಪ.॥ ಭಕ್ತಿಯ ಒಲವಿನ ನಂದಾದೀಪವ ಹಚ್ಚುವೆ। ಭಕ್ತಿಯ ಹಣತೇಲಿ ಜ್ಯೋತಿಯ ಬೆಳಗುವೆ। ಭಕ್ತಿಯ ಕುಸುಮದಿಂ ಅರ್ಚನೆಗೈಯುವೆ। ಭಕ್ತಿಯಿಂದ ಪಾದ ಪೂಜೆ ಮಾಡುವೆ॥1॥ ಅರುಣ ಪಲ್ಲವ ಪಾದ ಕಿರಣ ಸೂಸುವ ತೇಜ। ಧರಣಿಯಾಳ್ವ ಭೋಜ ಸುಭದ್ರಾ ಪೂರ್ವಜ। ಹೇ ಕಾಮ ಜನಕ-ಕಮನೀಯ ವಿಗ್ರಹ। ಶಾರದೆ ಸನ್ನುತ ಭಕ್ತಜನ ರಂಜಕ॥2॥

**ಪನ್ನಗಶಯನ ಪಂಕಜ ನಯನ ರಾಗ: ಕಾನಡಾ**

ಪನ್ನಗಶಯನ ಪಂಕಜ ನಯನ। ಪಾಪ ವಿಮೋಚನ ಪದ್ಮ ನಾಭಮಾಂ ಪಾಹಿ॥ಪ॥ ವೆಂಕಟರಮಣ। ಸಂಕಟಹರಣ। ಶಾರದಾದಾಸಿ ವಂದಿತ ಚರಣ॥ಅ.ಪ.॥ ಪರಮ ಪುರುಷೋತ್ತಮ ಪುಣ್ಯ ಚರಿತ್ರ। ನಿನ್ನಯ ದಿವ್ಯನಾಮ ಪರಮ ಪವಿತ್ರ। ನಿನ್ನಯ ಲೀಲೇ ತಾ ಪರಮ ವಿಚಿತ್ರ। ಪರಮ ಭಕ್ತರಿಗೆ ಅದುವೇ ಸುಚಿತ್ರ॥1॥

**ಆನಂತ ಪದ್ಮನಾಭಂ ಆಶ್ರಯೇ (ಕೀರ್ತನೆ) ರಾಗ: ಆರಭಿ**

ಅನಂತ ಪದ್ಮನಾಭ ಆಶ್ರಯೇ॥ಪ॥ ಆದಿ ಮಧ್ಯಾಂತ ರಹಿತಂ। ಅಖಿಲ ಫಲದಾಯಕಂ। ಶ್ರೀನಾಯಕಂ॥ಅ.ಪ॥ ಘನನಯದೇಶಿಕ ನವರಸ ಪೂರಿತ। ಗಾನಕಲಾಮೃತ ದಾಯಕಂ ಸತತಂ। ಪರಿಮಳ ಮೃಗಮದ ತಿಲಕಂ ಭಾಸುರ। ಹರಿಕೇಶ ವಿಹಿತಂ ಆನಂದರೂಪಂ॥

**ಭಾವಯೇ ಪದ್ಮನಾಭ ಮಹಾನಿಶಂ ರಾಗ: ಮಧ್ಯಮಾವತಿ-ಆದಿತಾಳ**

ಭಾವಯೇ ಪದ್ಮನಾಭ ಮಹಾನಿಶಂ। ಭವ್ಯ ಗುಣನಿಲಯಂ॥ಪ॥ ದೇವಮುನಿ ಶರಣಂ ದೀನಜನಾಭರಣಂ। ಭಾವುಕ ವಿತರಣಂ ಪಂಕಜ ಚರಣಂ। ಪಾವನಾದ್ಭುತ ಕರಾತ್ಮಕರಿತ್ರಂ। ಪಾಪಜಾಲಕರ ಗಾನಲಲಿತ್ರಂ। ಸೇವಕಾಶ್ರಯ ಪಯೋರುಹ ಮಿತ್ರಂ। ಚಿನ್ಮಯಂ ನಯನಾಬ್ಜ ದಶಪತ್ರಂ॥1॥ ಹೇಮವಿರಾಜಿತ ದಿವ್ಯಕಿಶೋರಂ। ಕೋಮಲ ಮೃಗಮದ ಬಿಂದು ಲಲಾಟಂ। ಭೀಮ ಸಮರ ಭುವಿ ನಿಕೃತ ನಿಶಾದಂ। ಭೂಮಿಭರಾಸುರ ವನ್ಹಿಕೃಪಿತಂ। ಕಾಮಿನಿಜನ

ಮನೋಹರ ರೂಪಂ। ಖಂಡಿತಾಖಿಲ ಚರಾಚರ ತಾಪಂ। ಕಾಮದಂ ಸುಕೃತ ಹೀನದುರಾಪಂ। ಕಾಮ್ರಹಾದಿಕರ ಕಾದಿಕಲಾಪಂ॥2॥

**ಜಯ ಜಯ ಪದ್ಮನಾಭ ಮುರಾರೆ** **ರಾಗ: ಚಾರುಕೇಶಿ**

ಜಯ ಜಯ ಪದ್ಮನಾಭ ಮುರಾರೆ। ಜಯ ಜಗದೀಶ ರಮಾಕಾಂತಾ॥ಪ॥ ನಯನವಿನಿಂದಿತ ನಳಿನ ರುಚಿರದಳ। ನತಜನ ಶುಭಕರ ನಾರದ ಸೇವಿತ॥ಅ.ಪ॥ ಪರಮ ಭಕ್ತ ದಿವಾಕರ ಕಾಮಪೂರಣ। ಪರಿಲಸ ಮಮ ಹೃದಿ ಪೂರ್ಣಚಂದ್ರಾನನ। ವರವಂಚಿ ಮಾರ್ತಾಂಡ ವರ್ಮಕೃತಲಕ್ಷದ್ವೀಪ। ಭೂರಿಮನೋಜ್ಞಾ ಮಹಾ ಪ್ರಮುದಿತಕೃಪಾವಾಸ॥ಚರಣ॥

**ಜಯಜಯ ಪದ್ಮನಾಭಾನುಜೇಯ** **ರಾಗ: ಶ್ರೀ**

ಜಯಜಯ ಪದ್ಮನಾಭಾನುಜೇಯ। ಜಯಜಯ ಮೋಹನ ಕಾರ್ಯವೇಶಾ॥ಪ॥ ಜಯ ಸಕಲಾಭರಮೋಕ್ಷಾ। ಜಯಸಮ ಭುವನೇಶಾ॥ಅ.ಪ॥ ಜಯ ಕೃಪಾಭರಿತ ಸಪಾಂಗ। ಜಯ ಕಂದರ್ಪ ಸನ್ನುತ ರಾಂಗ। ಜಯ ಮೌಳಿ ಕೋದ್ವಿತ ಗೌಂಜ। ಜಯದನುದಾಳಿವಿ ಭೌಂಜ॥ಚರಣ॥

**ಮಾಮವ ಪದ್ಮನಾಭ ಸದಾ** **ರಾಗ: ವರಾಳಿ**

ಮಾಮವ ಪದ್ಮನಾಭ ಸದಾ ಸುರಸಾಧ್ಯ ಬಹುಮಾನ್ಯ ಚರಿತವಿಭೋ॥ಪ॥ ಭೂಮಿಭರ ಹರನಾಥ ಲೋಕ ವರದ ಮುರಹರ। ಭೋಗಿಭೋಗನಿವಾಸ ವಿಕಸಿತ ಸಾರಸೋಪಮ ಲೋಚನ ಮಾಲ॥ಅ.ಪ॥ ಸೋಮ ಸದೃಶ ಮುಖ ಫಲದೇವ ಸಹಿತ। ನಿರುಪಮ ಶೋಭ ಸಮಶ್ರಿಜನ ಶರಣ ಗೋಪಾಲ। ಕಾಮಜನಕ ಧಾರಿತ ವೈರಿ ನಿವಹ ಶುಭಕರ ಕಾಂತಪಿತ ಪರಾಜಿ ವಿಲಸಿತ ಭೂರಿ ನೀಲ ವರಾಳಿ ಸಮಕ್ಷ॥ಚರಣ॥

**ಪದ್ಮನಾಭ ಪಾಹಿ ವಿಭವಸಾರೆ** **ರಾಗ: ಹಿಂದೋಳ**

ಪದ್ಮನಾಭ ಪಾಹಿ ವಿಭವಸಾರೆ। ಗುಣವಚನ ಶೌರೆ॥ಪ॥ ಸದ್ಮಕಲಿತ ಮುನಿ ಮಾನಸ ಪಂಕಜ। ಸಕಲ ಭುವನ ಪರಿಪಾಲನ ಲೋಲುಭ॥ಅ.ಪ.॥ ಚಾರುಮುಖಜಿತ ಚಂದ್ರಸುನೇತ್ರ। ಚಾರುವಿಲಾಸಿತ ಕರುಣಾಸಾಂದ್ರ॥ಚ॥ ಭೂರಿಕೋಪಹತ ಕಲಾಧನುಚಂದ್ರ। ಪಾವನ ಚರಿತ ಶ್ರೀರಾಮಚಂದ್ರ॥ಚ॥

**ವಂದೇ ಸದಾ ಪದ್ಮನಾಭಂ** **ರಾಗ: ಖಮಾಚ್**

ವಂದೇ ಸದಾ ಪದ್ಮನಾಭಂ। ಪದವಂದಾರು ಸಮುದಯ ಮಂದಾರ ಮಾಲಂ॥ಪ॥ ಕುಂಜ ಮಹಾತ್ವರ ಮೋಹನ ದಂತಂ। ನಿಜ ಸುಂದರ ತರುರುಚಿ ನಿಂದಿತ ಮಾರಂ॥ಅ.ಪ॥ ಭೂರಿ ಕೃಪಾರಸ ವಿಲಸಿತ ಪಾಂಗಂ। ಭೋಗಿ ವರೇಣ್ಯಂ ಭಣಜಿತರಂಗಂ। ನಾರದ ಮುಖಮುನಿ ಹೃದಯಾಜ್ಞ ಭೃಂಗಂ। ನವನೀತ ಸಮರುಚಿ ಪರಿಲಸಿತಾಂಗಂ॥ಚರಣ॥

**ಇದು ಭಾಗ್ಯ ಇದು ಭಾಗ್ಯ** **ರಾಗ: ಕಲ್ಯಾಣಿ-ಖಂಡಏಕತಾಳ**

ಇದು ಭಾಗ್ಯ ಇದು ಭಾಗ್ಯ ಇದು ಭಾಗ್ಯವಯ್ಯ॥ಪ॥ ಪದುಮನಾಭನ ಪಾದಭಜನೆ ಸುಖವಯ್ಯ॥ಅ.ಪ॥ ಕಲ್ಲಾಗಿ ಇರಬೇಕು ಕಠಿಣ ಭವ ತೊರೆಯೊಳಗೆ। ಬಿಲ್ಲಾಗಿ ಇರಬೇಕು ಬಲ್ಲವರೊಳು॥ ಮೆಲ್ಲನೇ ಮಾಧವನ ಮನದಿ ಮೆಚ್ಚಿಸಬೇಕು। ಬೆಲ್ಲವಾಗಿರಬೇಕು ಬಂಧುಜನರೊಳಗೆ॥1॥ ಬುದ್ಧಿಯಲಿ ತನುಮನವ ತಿದ್ದಿಕೊಳುತಿರಬೇಕು। ಮುದ್ದಾಗಿ ಇರಬೇಕು ಮುನಿ ಯೋಗಿಗಳಿಗೆ। ಮದ್ವ ಮತಾಬ್ಧಿಯಲಿ ಮೀನಾಗಿ ಇರಬೇಕು। ಶುದ್ಧನಾಗಿರಬೇಕು ಕರಣತ್ರಯಂಗಳಲಿ॥2॥ ವಿಷಯಭೋಗದ ತೃಣಕೆ ಉರಿಯಾಗಿ ಇರಬೇಕು। ನಿಶಿ ಹಗಲು ಶ್ರೀ ಹರಿಯ ಭಜಿಸಬೇಕು। ವಸುಧೆಯೊಳು ಪುರಂದರವಿಠಲನ ನಾಮವ। ಹಸನಾಗಿ ನೆನೆನೆನೆದು ಸುಖಿಯಾಗಬೇಕು॥3॥

### ಬದುಕಿದೆನು ಬದುಕಿದೆನು ರಾಗ: ಸಿಂಧೂಭೈರವಿ-ಖಂಡಏಕತಾಳ

ಬದುಕಿದೆನು ಬದುಕಿದೆನು ಭವ ಎನಗೆ ಹಿಂಗಿತು। ಪದಮನಾಭನ ಪಾದದೊಲುಮೆ ಎನಗಾಯಿತು।।ಪ।। ಹರಿ ತೀರ್ಥ ಪ್ರಸಾದಯೆನ್ನ ಜಿಹ್ವೆಗೊದಗಿತು। ಹರಿಯ ನಾಮಾಮೃತವು ಕಿವಿಗೊದಗಿತು। ಹರಿಯ ದಾಸರು ಎನ್ನ ಬಂಧು ಬಳಗಾದರೂ। ಹರಿಯ ಶ್ರೀ ಮುದ್ರೆ ಎನಗಾಭರಣವಾಯಿತು।।1।। ಮುಕುತರಾದರು ಎನ್ನ ನೂರೊಂದು ಕುಲದವರು। ಮುಕುತಿ ಮಾರ್ಗಕೆ ಯೋಗ್ಯ ನಾನಾದೆನು। ಮುಕ್ತಿದಾಯಕನ ಭಕ್ತಿಗೆ ಮನವು ನೆಲೆಸಿತು। ವ್ಯಕ್ತವಾಯಿತು ನಾಲಗೆಯೊಳು ಹರಿನಾಮ।।2।। ಇಂದೆನ್ನ ಸಂತತಿಗೆ ಸಕಲ ಸಾಧನವಾಯ್ತು। ಮುಂದೆನ್ನ ಜನ್ಮವು ಸಫಲವಾಯಿತು । ತಂದೆ ಶ್ರೀ ಕಾಗಿನೆಲೆಯಾದಿ ಕೇಶವರಾಯ। ಬಂದೆನ್ನ ಹೃದಯದಲಿ ನೆಲೆಯಾಗಿ ನಿಂದ ।।3।।

### ಉದರ ವೈರಾಗ್ಯವಿದು ರಾಗ: ನಾದನಾಮಕ್ರಿಯೆ-ಆದಿತಾಳ

ಉದರ ವೈರಾಗ್ಯವಿದು, ನಮ್ಮ ಪದುಮನಾಭನಲಿ ಲೇಶ ಭಕುತಿಯಿಲ್ಲ।।ಪ।। ಉದಯ ಕಾಲದಲೆದ್ದು। ಗಡಗಡ ನಡುಗುತ। ನದಿಯಲಿ ಮಿಂದೆನೆಂದು ಹಿಗ್ಗುತಲಿ।। ಮದ ಮತ್ಸರ ಕ್ರೋಧ ಒಳಗೆ ತುಂಬಿಟ್ಟುಕೊಂಡು। ಬದಿಯಲ್ಲಿದ್ದವರಿಗಾಶ್ಚರ್ಯವ ತೋರುವುದು।।1।। ಕಂಚುಗಾರನ ಬಿಡಾರದಂದದಿ। ಕಂಚು ಹಿತ್ತಾಳೆ ಪ್ರತಿಮೆಗಳನೆರಹಿ।। ಮಿಂಚಬೇಕೆಂದು ಬಲು ಜ್ಯೋತಿಗಳನು ಹಚ್ಚಿ। ವಂಚನೆಯಿಂದಲಿ ಪೂಜೆ ಮಾಡುವುದು।।2।। ಕರದಲ್ಲಿ ಜಪಮಣಿ ಬಾಯಲಿ ಮಂತ್ರವು। ಅರಿವೆಯ ಮುಸುಕನು ಮೋರೆಗೆ ಹಾಕಿ।। ಪರಸತಿಯರ ಗುಣ ಮನದಲಿ ಸ್ಮರಿಸುತ। ಪರಮ ವೈರಾಗ್ಯಶಾಲಿ ಎಂದೆನಿಸುವುದು।।3।। ಬೂಟಕತನದಲಿ ಬಹಳ ಭಕುತಿ ಮಾಡಿ। ದಿಟನೀತ ಸರಿಯಾರಿಲ್ಲೆನಿಸಿ।। ನಾಟಕ ಸ್ತ್ರೀಯಂತೆ ಬಯಲ ಡಂಭವ ತೋರಿ। ಊಟದ ಮಾರ್ಗದ ಜ್ಞಾನವಿದಲ್ಲದೆ।।4।। ನಾನು ಎಂಬುದ ಬಿಟ್ಟು ಜ್ಞಾನಿಗಳೊಡನಾಡಿ। ಏನಾದರೂ ಹರಿ ಪ್ರೇರಣೆಯೆಂದು।। ಧ್ಯಾನಿಸಿ ಮೌನದಿ ಪುರಂದರವಿಠಲನ। ಕಾಣದೆ ಮಾಡಿದ ಕಾರ್ಯಗಳೆಲ್ಲವು।।5।।

### ಓಂಕಾರ ಪರಬ್ರಹ್ಮ ವಾಸುದೇವರ (ಪದ್ಮನಾಭನ ಕಥೆ)

ಓಂಕಾರ ಪರಬ್ರಹ್ಮ। ವಾಸುದೇವರ ಪಾದ-ಪಂಕಜಾ। ಸುರ ನದಿಯ ನಿರ್ಮಿಸಿದನೇ। ಸಂಕರ್ಷಣಾನಂತ ಪದ್ಮನಾಭನ ಕತೆಯ ಅಲಂಕಾರ ಪೂಜೆ ಮೆಲ್ಲನೆಯಾದವು। ಅರುಣ ಉದಯದಲಿ ಭೂಸುರರು ಯಮುನೆಗೆ ಹೋಗಿ ಹರುಷದಲಿ। ಗಂಗೇನ ಎದುರುಗೊಂಡು। ವರರತ್ನ ದೀಪಗಳು ಇಟ್ಟು ಪರಿಮಳ ಪುಷ್ಪ ಸರಗಳನು ರಚಿಸುವರು ಸಂಭ್ರಮದಲಿ। ಭಾದ್ರಪದ ಶುದ್ಧ ಚತುರ್ದಶಿ ಪುಣ್ಯದಿನದಲಿ। ಚಿದ್ರೂಪ ಹರಿ ಹಿಗ್ಗುತ ಆಗ ಮೊದಲು ಭದ್ರೀಶ ಶಿರ ಖಚಿತ ಕನಕದಾ। ಕುಂಭ ಕಲಶಗಳು ಯುದ್ರಾಯಿಟ್ಟಾಲಯಕೆ। ತಂದರೂ। ಸುರಚಿರದ ಹೇಮ ಮಂಟಪದಿ। ಕಲಶವ ರಚಿಸಿ। ಪರಿಪರಿಯ ಫಲ ವಸ್ತುಗಳನ್ನೇ ಕಟ್ಟಿ। ನವ ರತ್ನ ದೀಪಗಳು ಇಟ್ಟು ಪರಿಮಳ ಪುಷ್ಪಸರಗಳನು ರಚಿಸುವರು ಸಂಭ್ರಮದಲಿ। ಕುಂದಣದ ರೇಷ್ಮೆಯ ಕುಣಿಕೆದಾರವು। ತೋಳಿಗೆ ಚಂದದಿ ಕಟ್ಟಿ। ಬಾಗಿನವು ಕೊಟ್ಟು। ಇಂದಿರಾಪತಿಗೆ ವಿವರಿಸುತಲಾರತಿ ಎತ್ತಿ ವಂದಿಸಿದರು ಶ್ರೀಮದನಂತನಿಗೆ ಸುಲಿದ ಬಾಳೆಹಣ್ಣು। ಸೂಪ ಸಕ್ಕರೆ ಘೃತವು ಬಲಿತ ತೆಂಗಿನಕಾಯಿ। ಬಾಗಿನಂಗಳು ನಯವಾದ ದೋಸೆ ಆಂಬೊಡೆ ಒಬ್ಬಟ್ಟು। ಹೋಳೀಗೆ ವೈಕುಂಠಪತಿಗೆ ಅರ್ಪಿತಗೈದರೂ। ಎದ್ದು ಕರ ಮುಗಿದು ಏಕ ಮನಸ್ಸಿನಲಿ ಅಡ್ಡ ಬಿದ್ದು ಪ್ರೇಮದಲಿ ಗೋಚರಾ। ಕಥೆಗಳನು ಪೇಳುವರು ಹರುಷದಿಂದ ಜಯಮಂಗಳಾ ಶುಭಮಂಗಳಾ।।

### ಪಾಲಿಸಿದೌ ಪಾಂಡವರ ಅಹಲ್ಯೆಯ (ಮಂಗಳ)

ಪಾಲಿಸಿದೌ ಪಾಂಡುವರ ಅಹಲ್ಯೆಯ। ಬಾಲೆ ದ್ರೌಪದಿ ಅಜಾಮಿಳನ ಲೀಲೆಯಿಂದೊಲಿದ। ಪಾಲಿಸಿದಂದದಿ ಕಾಯ್ದುಕೊ ಬೇಕೆಂದು ಸ್ತುತಿಸಿದನು।।ಪ।। ಮಂಗಳಂ ಶ್ರೀಪದ್ಮನಾಭನಿಗೆ ಜಯಮಂಗಳಂ ಶ್ರೀಮದನಂತನಿಗೆ।।

ಕರುಣೆಯಿಂದಲೇ ಕರಿರಾಜನ ಸಲಹಿದೆ। ನಾರಾಯಣ ಎನ್ನ ರಕ್ಷಿಸೆಂದು। ಬಾರಿ ಬಾರಿಗೂ ಮೊರೆಯಿಡುವ ಮುನಿಯ ಮುಂದೆ ತೋರಿದ ಹರಿ ವೃದ್ಧ ವಿಪ್ರನಾಗಿ॥1॥ ಸಲಹಿದೆ ದ್ರುವಪ್ರಹ್ಲಾದಂಬರೀಶನ್ನ। ಬಲಿ ವಿಭೀಷಣ ರುಕ್ಮಾಂಗದನ। ಬಲಿಯ ರಕ್ಷಿಸಿದಂತ ಜಲಜಾಕ್ಷ। ನೀ ಎನ್ನ ಸಲಹಿಕೋ ಬೇಕೆಂದು। ಸ್ತುತಿಸಿದನು ಮಂಗಳ ಶ್ರೀಪದ್ಮನಾಭನಿಗೆ॥2॥ ಎದುರಾಗಿ ಬರುವ ವಿಪ್ರನ ಈಕ್ಷಿಸಿ। ಮುನಿ ಪದಯುಗಕೆರಸಿ ಕರವ ಮುಗಿದು ಮದನ ಜನಕ ಶ್ರೀಮದನಂತಸ್ವಾಮಿಯ ಮುದದಿ। ಬಲ್ಲರೆ ತೋರಿ ಎನಗೆಂದನು॥3॥ ಬಲ್ಲೆ ತೋರುವೆ ಸಿರಿವಲ್ಲಭನಂಘ್ರಿಯ। ತಲ್ಲಣಿಸದಿರು ಎಂದು ತಲೆದಡವಿ। ಮೆಲ್ಲನೆ ಕರೆತಂದು ಮಾಯಾವಾದನೆ ಮುನಿ। ಅಲ್ಲಿ ಕಂಡನು ದಿವ್ಯ ವೈಕುಂಠದ॥4॥ ಸಾಸಿರ ಸೂರ್ಯಪ್ರಕಾಶ ದಂದಲಿ। ಆದಿಶೇಷ ರಾಜನ ಮೃದುಹಾಸಿನಲಿ। ಶ್ರೀಸತಿ ಭೂಸತಿ ಸಹನಾಗಿ ಮೆರೆವೊ। ಸರ್ವೇಶ ಮೈದೋರಿದ ಮುನಿಪತಿಗೆ॥5॥ ವರಶಂಕು ಚಕ್ರಗದಾ ಕಂಕಣ। ಬಹುಪರಿ ಭುಜಕೀರ್ತಿ ಚತುರ್ಭುಜದಿ। ವರದಿ ಕೌಸ್ತುಭ ಕಂಠಸರಗಳಿಂದ। ಸರ್ವೇಶ ಮೈ ದೋರಿ ಮುನಿಪತಿಗೆ॥6॥ ಹೊಳೆವ ನಿಟ್ಟಿಸಳು ಕಂಗಳು ಕುಡಿ ಹಬ್ಬಿನ। ಚೆಲುವ ನಾಸಿಕ ಕೋಮಲರಲ್ಲದ। ಹೊಳೆ ಹೊನ್ನು ಕಂಚು ಕಂದರಿ। ಚತುರ್ಭುಜದ ನಿರ್ಮಲ ರೂಪದ ಹರಿಯು ಮೈದೋರಿದ ಮುನಿಪತಿಗೆ॥7॥ ಮಂಡಿತ ರತ್ನ ಕೀರಿಟ ಕುಂಡಲ ಭಾಹು। ತಾಂಡವಾಡುವ ದಿವ್ಯ ಕುಂಡಲವು। ಕಣ್ ತೆರೆದು ನಸುಲ ಕಸ್ತೂರಿ। ಥಳಥಳಿಪ ಬ್ರಹ್ಮಾಂಡ ನಾಯಕನು ಮೈದೋರಿದನು॥8॥ ಕುಂದದ ವಜ್ರಾಂಗಿ ಕಾಂಚಿಯಧಾಮ। ಫುಂಗಂಟೆ ಪೊಳೆವ ಪೊನ್ನಂದಿಗೆಯು। ಅಂಗಾದ ಧ್ವಜ ವಜ್ರ ಕುಶರೇಖೆ। ಚರಣದ ನಿರ್ಮಲ ರೂಪ ಹರಿಯು ಮೈ ದೋರಿದನು॥9॥ ಪ್ರತ್ಯಕ್ಷ ಹರಿ ಸರ್ವ ಭೂಪಮ ನೋಡಿ। ಹರ್ಷದಿ ಮುನಿಯು ಉದ್ದಂಡ ನಮಸ್ಕಾರ ಮಾಡಿದನೂ...ಮಂಗಳಂ ಶ್ರೀ ಪದ್ಮನಾಭನಿಗೆ ಜಯಮಂಗಳಂ ಶ್ರೀ ಮಧನಂತನಿಗೆ॥10॥

## ಮಂಗಳಾರುತಿಯ ತಂದೆತ್ತಿರೆ (ಆರತಿ) ರಾಗ:ಸುರುಟಿ

ಮಂಗಳಾರುತಿಯ ತಂದೆತ್ತಿರೆ। ಮಂಗಳ ಮಹಿಮ ಶ್ರೀಮದಾನಂತನಿಗೆ॥ಪ॥ ಎಲ್ಲವರ ತೋರುಬಾರೆಂದು ಮುನೀಶಗೆ। ಮೆಲ್ಲ ಮೆಲ್ಲನೆ ಕರವ ಪಿಡಿದಾ॥ ಇಲ್ಲೆಯಿರ್ಪನು ಪದ್ಮನಾಭನಾ ನೋಡೆಂದು॥ ನಿಲ್ಲದೆ ಮಾಯವಾದನು ಹರಿಯು॥1॥ ಶೇಷನ ಹಾಸುಕಿ ಮೇಲೆ ಹರಿಗೆ। ಸರ್ವೇಶ್ವರಿ ಚರಣವನೊತ್ತುತ್ತಿರೆ॥ ದಾಸರು ಕೆಲದಲ್ಲಿ ಸ್ತೋತ್ರವ ಮಾಡುತಲಿರೆ। ವಾಸುದೇವರ ಕಂಡಾನು ಮುನಿಯು॥2॥ ಹಸಿವಿನಿದ್ರಿ ತೊರೆವ ರಸಮುನಿಪನ। ಶುದ್ಧ ಹೃದಯವ ಕಂಡನು ದೇವನು। ಭೀಮೇಶ ಕೃಷ್ಣನ ರೂಪವ ತೋರುತಲಾಗ। ವೃದ್ಧ ಬ್ರಾಹ್ಮಣನಾಗಿ ಬಂದು ನಿಂತಾ॥3॥

## ಮಾರಹರನ ಸುಕುಮಾರನ ತನಯನ

ಮಾರಹರನ ಸುಕುಮಾರನ ತನಯನ ವಾರಿಜಂಗಳಿಗೆರಗಿ। ಶೃಂಗೇರಿಯ ಶಾರದಾಂಬೆಯ ಭಜಿಸಿ। ಹರಿಕಥಾಮೃತವ ಭಾರತರ ವಿಭವದಲಿ ಪೇಳುವೆ ಪಾಂಡವರು ಕೌರವರೊಡನೆ ಸೋತು ಅರಣ್ಯದೊಳಗಿರುತಿರೆ ವಿಚಾರಿಸಿ ಬಂದ್ವರೀಗೆ ಜಯಜಯ॥ಪ॥ ದೂರದಿಂದಲೇ ಎದುರಾಗಿ ಪಾಂಡವರನ್ನು ಆಗ ಬಂದುಪಚರಿಸಿ। ಮಾರ್ಜನಮಾಡಿ। ಬೇಗ ಹರಿಗೆ ವಂದಿಸಿ। ಎಂದೆನಲಾಗ ಈಗಲೆ ಭಾದ್ರಪದ ಮಾಸದಿ ಭಾಮೆ ಶುದ್ಧ ಚತುದರ್ಶಿಯ ದಿನ ಬೋಗಿ ಭೂಷಣ ಮದನಂತನ ಭಜಿಸಲೇಳಿದ ಪದ್ಮನಾಭಗೆ ಮೇರುವೆ ಯಾರುತಿಯ ಬೆಳಗೀರೆ॥1।. ಈ ವ್ರತವನು ಹಿಂದೆ ಯಾರು ಮಾಡಿದರೆನಲು ಪೂರ್ವದಿ ಸುಮಂತನೆಂಬ ಬ್ರಾಹ್ಮಣನಿಗೆ ನಾರಿ ಸುಶೀಲೆಯೆಂಬ ಸತಿಯಿರಲಾಗ ಘೋರ ನೌಕೆಯು ಮುತ್ತಿಗೆಯ್ಯಲು ಬೇರೆ ಮತ್ತೊಬ್ಬಳನು ತಂದು ರಾಜಕುಮಾರಿಯನು ತಂದೊಮ್ಮೆ ಮುನಿಪಗೆ ಧಾರೆಯೆರೆಸಿದ ಪದ್ಮನಾಭಗೆ ಮುತ್ತಿನಾರುತಿಯ ಬೆಳಗಿರೆ॥2॥ ಏನಿದು ವ್ರತವೆಂದು ಮಾನಿನಿಮಣಿ ಕೇಳಲ್ ದೀರ ಶ್ರೀಮದನಂತನ ವ್ರತವಿದು ಎಂದು ಕೋಮಲಾಂಗಿಯರು ಪೇಳಲು ವ್ರತಗಳ ಮಾಡಿ ತಾನು ದಾರವ ಕಟ್ಟಲು। ಮುನಿಪತಿಯು ಬೇಗ ನಾರಿ ಸಹ ರಥವೇರಿ ಮನೆಗೆ ಬಂದರುಆನಂದ ಐಶ್ವರ್ಯದೊಳಿರುತಿರೆ ಪದ್ಮನಾಭಗೆ ಮೇರುವೆ ಯಾರತಿಯಾ ಬೆಳಗೀರೆ॥3॥ ಮಡದಿಯ ಕರೆದೀಗ ದಾರವಿದೇನೆನಲು ದೀರ ಶ್ರೀಮದನಂತನ ವ್ರತವಿದು ಎಂದು ಕೋಮಲಾಂಗಿಯು

ಪೇಳಲು ಮಡದಿಯ ಕೈಯ್ಯ ದಾರವ ಹರಿದಿಡಲು ಹರ ಹರಾ ಎನುತ ಹಾಲು ತುಪ್ಪದಲದ್ದಲದರನು ಬೋರನಾಥನ ಭಾಗ್ಯ ತೊಲಗಿತು। ಸಂಪದವನಿತ್ತ ಶ್ರೀ ಪದ್ಮನಾಭಗೆ ಕುಂದಣದಾರುತಿಯ ಬೆಳಗೀರೆ॥4॥ ಹರಿಯ ಕಾಣುವೆನೆಂದು ವರ ಮುನಿಪತಿ ಪೋಗಲ್। ಮರನಲ್ಲೊಂದ್ ವಾಯುಸಮ ವಿಪ್ರ ವೇಶದಿ ಮುನಿಯ ತಡೆಯಲು ಸಂಪದವನಿತ್ತ ಶ್ರೀಪದ್ಮನಾಭಗೆ ಹರಳಿನಾರುತಿಯ ಬೆಳಗೀರೆ॥5॥ ಕನಕರತ್ನದ ಕೋಟಿ ಕಾಂಚಣದರಮನೆ ಗಿಳಿ ಹಂಸೆ ರಾಜಬೀದಿ ಪೊಂಗಳಾಸಾಲು ಶೇಷನಾ ಮೇಲೆ ಮುನಿ ಮುನಿಂದ್ರಾದಿಗಡಣದಿ ಸಂಪದವನಿತ್ತ ಶ್ರೀಪದ್ಮನಾಭಗೆ ಭಕ್ತಿಯಾರುತಿಯ ಬೆಳಗೀರೆ॥6॥ ಮಡದಿಯ ಕರೆದೀಗ ಮಡಿಲ ತುಂಬೆಂದರೆ ಗುಡುಗುಡಿಸುತ ಬಾಗಿಲ ಇಕ್ಕಲು ಬಂದು ಕಡೆಯ ಕನ್ನಡಿ ಕಲಶದ ಅಕ್ಕಿಯು ತಂದು ಮಡಿಲೊಳಿರಿಸಿ ಮಗಳ। ನಾರಿ ಸಹ ರಥವೇರಿ ಮನೆಗೆ ಬಂದರು ನಡುವೆ ಮಾರ್ಗದಿ ನಿತ್ಯ ಕರ್ಮಕೆ ಕಡು ಬೇಗದಿ ಯಮುನೆ ತಡೆಯಲು ತೊಡೆಯಲೊಪ್ಪಿದ ಪದ್ಮನಾಭಗೆ ಚಿನ್ನದಾರತಿಯ ಬೆಳಗೀರೆ॥7॥

## ಜಯಮಂಗಳಂ ಪದ್ಮನಾಭನಿಗೇ (ಮಂಗಳ)

ಜಯಮಂಗಳಂ ಪದ್ಮನಾಭನಿಗೇ। ಭವಹರನಿಗೆ ಭಕ್ತವತ್ಸಲಗೇ॥ಪ॥ ಪಾಲಿಸಿದ್ಯೆ ಪಾಂಡವರಹಲ್ಯೆಯ ಬಾಲೆ ದ್ರೌಪದಿ ಅಜಮಿಳನಾ ಲೀಲೆಯೊಂದೊಲಿದು ನೀ ಸಲಹಿದಂದ ದಲೆನ್ನ ಪಾಲಿಸಬೇಕೆಂದು ಸ್ತುತಿಸಿದನೂ॥1॥ ಸಲಹಿದೆ ಧ್ರುವ ಪ್ರಹ್ಲಾದಂಬರೀಷನಾ ವರ ವಿಭೀಷಣನ ರುಕ್ಮಾಂಗದನಾ ಒಲಿದು ಸಲಹಿದಂತೆ ಜಲಜಾಕ್ಷನೀ ಎನ್ನ ಕರುಣಿಸಬೇಕೆಂದು ಸ್ತುತಿಸಿದನು॥2॥ ಕಾರುಣ್ಯದಿಂದ ಕರಿರಾಜನ ಸಲಹಿದೇ ನಾರಾಯಣ ಎನ್ನ ರಕ್ಷಿಸೆಂದು ಬಾರಿಬಾರಿಗೂ ಮುನೀ ಮೊರೆಯಿಡುವುದಾ ಕಂಡು ತೋರಿದ ಹರಿ ವೃದ್ಧವಿಪ್ರನಾಗೀ॥3॥ ಬಲ್ಲೆ ತೋರುವೆ ಸಿರಿ ವಲ್ಲಭನಂಘ್ರಿಯ ತಲ್ಲಣಿಸಬೇಡವೆಂದು, ತಲೆದಡವಿ, ಮೆಲ್ಲನೆ ಕರೆದೊಯ್ದು ಮಾಯವಾಗಲು ವಿಪ್ರ ಅಲ್ಲಿ ಕಂಡನೆ ದಿವ್ಯ ವೈಕುಂಠವಾ॥4॥ ವರಶಂಖ ಚಕ್ರಗದಾಬ್ಜ ಬಾವುಲಿಮಿಗೆ ಕರ ಭುಜಕೀರ್ತಿ ದಿವ್ಯಾಂಬರವೂ ಕಡಗ ಕಂಕಣ ವಜ್ರ ಆಭರಣದಿಂದ್ಹೊಳೆವೋ ನಿರ್ಮಲ ರೂಪದ್ಧರಿಯು ಮೈದೋರಿದನಾ॥5॥ ಹೊಳೆವೋ ನಿಟ್ಟೆಸಳು ಕಂಗಳು ಕೂಡಿದ್ಹುಬ್ಬಿನ ಹೊಳೆವೊ ನಾಸಿಕದ ಕೋಮಲಗಲ್ಲದ ಗೆಲುವಿನ ಕಂಬುಕಂಧರ ಚತುರ್ಭುಜದ ನಿರ್ಮಲ ರೂಪಿನ್ಹರಿಯು ಮೈದೋರಿದನಾ॥6॥ ಇಂದ್ರನೀಲದ ವರಗಾತ್ರದ ವರಶರ ಇಂದುಮುಖದಿ ಸುಳಿಗುರುಳುಗಳಾ ಕಂಡೆಂದು ನೊಸಲ ಕಸ್ತೂರಿ ಸಾಮದಿ ಹೊಳೆವೋ ಶ್ರೀರಂಗ ಮೈದೋರಿದ ಮುನಿಸುತಗೇ॥7॥ ಅಂಬುಜೋದ್ಭವ ಶಂಭು ಅಮರಾ ಕಂಬದ ಜಯಜಯವೆನಲು ನಾರದ ತುಂಬುರರು ಪಾಡಲು ತಿಲೋತ್ತಮೆ ರಂಭೆ, ಊರ್ವಶಿ ನರ್ತಿಸುತಿರಲಾ ಸಂಭ್ರಮ ದಿಂದ್ಹರಿಯೂ ಮೆರೆದನೂ॥8॥

